# ಕನ್ನಡ ಅಧ್ಯಯನ

## ಭವಿಷ್ಯದ ಕರ್ನಾಟಕ

ಸಂಪುಟ : ೩

ಸಂಚಿಕೆ : ೨

ಸಂಪಾದಕ

ಡಾ. ಕರೀಗೌಡ ಬೀಚನಹಳ್ಳಿ



# ಕನ್ನಡ ಅಧ್ಯಯನ

ಗೌರವ ಪ್ರತಿ.

## ಭವಿಷ್ಯದ ಕರ್ನಾಟಕ

ಸಂಪಾದಕ

**ಡಾ. ಕರೀಗೌಡ ಬೀಚನಹಳ್ಳಿ**




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**KANNADA ADHYAYANA** (Kannada Bi-Annual of Kannada University) Edited by Dr. Karigowda Beechanahalli. Published by Director, Prasaranga, Kannada University, Hampi, Vidyaranya, Kamalapura - 583 221, Pp: X+102, First Impression 1995, Rs. 25.00

Vol 3, No. 1
ಅರ್ಧವಾರ್ಷಿಕ ಪತ್ರಿಕೆ: ಸಂಪುಟ ೩, ಸಂಚಿಕೆ ೧



**ಪ್ರಕಾಶಕರು**

ಡಾ. ಕರೀಗೌಡ ಬೀಚನಹಳ್ಳಿ

ನಿರ್ದೇಶಕರು, ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೨೧

**ಬೆಲೆ** : ಬಿಡಿ ಪ್ರತಿ ರೂ. ೨೫

ವಾರ್ಷಿಕ ಚಂದಾ ರೂ. ೫೦

**ಮುಖಪುಟ ವಿನ್ಯಾಸ, ಕಂಪೋಸ್**

**ಮತ್ತು ಡಿ.ಟಿ.ಪಿ. ಸಂಯೋಜನೆ**

ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಮುದ್ರಣ**

ಲಕ್ಷ್ಮಿ ಮುದ್ರಣಾಲಯ

ಚಾಮರಾಜಪೇಟೆ

ಬೆಂಗಳೂರು ೫೬೦ ೦೧೮

ದೂರವಾಣಿ ೬೬೧೩೧೨೩

# ಮುನ್ನುಡಿ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ ಸಾಹಿತ್ಯವನ್ನು ಹುಟ್ಟಿಸುವುದು ನಮ್ಮ ವಿಶ್ವವಿದ್ಯಾಲಯದ ಕರ್ತವ್ಯವಾಗಿದೆ. ಶಾಸ್ತ್ರ - ಕಲೆ, ಅಭಿಜಾತ - ಜಾನಪದ, ಮಾರ್ಗ - ದೇಸಿ, ಸ್ವಕೀಯ - ಪರಕೀಯ, ಪೌರ್ವಾತ್ಯ - ಪಾಶ್ಚಾತ್ಯ ಈ ಬಗೆಯ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿ ಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿಬರುವ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ. ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ. ನಮ್ಮ ಪ್ರಸಾರಾಂಗ ಇದಕ್ಕಿಂತ ವಿಶಾಲವಾದ, ಹೆಚ್ಚು ಪರಿಣಾಮಕಾರಿಯಾದ ಪರಿಪ್ರೇಕ್ಷ್ಯವನ್ನು ಕಟ್ಟುವುದರಲ್ಲಿ ತೊಡಗಿದೆ.

ಪ್ರಸಾರಾಂಗದ ಪ್ರಕಟಣೆಗಳಿಗೆ ಇಂಥ ಒಂದು ಸಾರ್ಥಕವಾಗಬಲ್ಲ ಉದ್ದೇಶವಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಒಂದು ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಈ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವೆಂದರೂ ತಪ್ಪಿಲ್ಲ.

ಕರ್ನಾಟಕದ ಸಮಗ್ರ ಅಧ್ಯಯನಾಸಕ್ತಿಯನ್ನು ಬೆಂಬಲಿಸುವ ಉದ್ದೇಶದಿಂದ ಹೊರಬರುತ್ತಿರುವ ಕನ್ನಡ ಅಧ್ಯಯನ ಸಂಚಿಕೆಗಳು ಸಂಶೋಧನ ಕ್ಷೇತ್ರಕ್ಕೆ ಅಮೂಲ್ಯ ಕಾಣಿಕೆಗಳಾಗಿವೆ. ಪ್ರತಿಬಾರಿಯೂ ಒಂದೊಂದು ಪ್ರಮುಖವಾದ ಪ್ರಚಲಿತ ವಿದ್ಯಮಾನಕ್ಕೆ ಸ್ಪಂದಿಸಿ, ಸಮಗ್ರವಾಗಿ ಬೆಳಕು ಚೆಲ್ಲಲು ಪ್ರಕಟವಾಗಿರುವ ಈ ಸಂಚಿಕೆಗಳು ಈಗಾಗಲೇ ವಿದ್ವಾಂಸರ ಮನ್ನಣೆಗೆ ಪಾತ್ರವಾಗಿವೆ. ೧೯೯೫ ರ ಫೆಬ್ರವರಿ ೧೫ ರಂದು ಕನ್ನಡ ವಿಶ್ವವಿದ್ಯಾಲಯದ ಮೊದಲನೆಯ ಘಟಿಕೋತ್ಸವ ಸಂದರ್ಭದಲ್ಲಿ ನಡೆದ 'ಭವಿಷ್ಯದ ಕರ್ನಾಟಕ' ಎಂಬ ವಿಚಾರ ಸಂಕಿರಣದ ಚರ್ಚೆಯ ಫಲಶ್ರುತಿಯೇ ಈ ಪ್ರಸ್ತುತ ಸಂಚಿಕೆ. ಈ ವಿಚಾರ ಸಂಕಿರಣದಲ್ಲಿ ಕರ್ನಾಟಕದ ಬಹುಮುಖ್ಯರಾದ ರಾಜಕಾರಣಿಗಳೂ, ಅರ್ಥಶಾಸ್ತ್ರಜ್ಞರೂ, ಸಾಹಿತ್ಯ ಮೀಮಾಂಸಕರೂ ಭಾಗವಹಿಸಿ ಚರ್ಚಿಸಿದ ಅಮೂಲ್ಯ ಚಿಂತನೆಗಳು ಇಲ್ಲಿವೆ. ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದ ನಿರ್ದೇಶಕರಾದ ಡಾ. ಕರೀಗೌಡ ಬೀಚನಹಳ್ಳಿ ಅವರು ಈ ಲೇಖನಗಳನ್ನು ಅಚ್ಚುಕಟ್ಟಾಗಿ ಸಂಪಾದಿಸಿಕೊಟ್ಟಿದ್ದಾರೆ. ಈ ಸಂಚಿಕೆ ಹೊರಬರಲು ಕಾರಣರಾದ ಈ ಎಲ್ಲಾ ಲೇಖಕರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

**ಡಾ. ಚಂದ್ರಶೇಖರ ಕಂಬಾರ**
ಕುಲಪತಿಯವರು

# ಸಂಪಾದಕೀಯ

ಕನ್ನಡ ವಿಶ್ವವಿದ್ಯಾಲಯವು ಎರಡನೆಯ ವರ್ಷದ ನುಡಿಹಬ್ಬವನ್ನು ತನ್ನ ಮೊದಲನೆಯ ವಾರ್ಷಿಕ ಘಟಿಕೋತ್ಸವವಾಗಿ ೧೯೯೫ ರ ಫೆಬ್ರವರಿ ೧೫ರಂದು ಆಚರಿಸಿತು. ಈ ಘಟಿಕೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸುವ ಸಲುವಾಗಿ ಈ ಸಂದರ್ಭದಲ್ಲಿ 'ಭವಿಷ್ಯದ ಕರ್ನಾಟಕ' ಎಂಬ ವಿಚಾರ ಸಂಕಿರಣವನ್ನು ನಿಯೋಜಿಸಲಾಗಿತ್ತು. ಮುಖ್ಯವಾಗಿ ಈ ವಿಚಾರ ಸಂಕಿರಣದಲ್ಲಿ ಸಮಗ್ರ ಕರ್ನಾಟಕ ರೂಪುಗೊಳ್ಳಬೇಕಾದರೆ ಏನೆಲ್ಲಾ ಸಮಸ್ಯೆಗಳನ್ನು ನೀಗಬೇಕು; ಏನೆಲ್ಲಾ ಸವಾಲುಗಳನ್ನು ಎದುರಿಸಬೇಕು - ಎಂಬುದರ ಬಗ್ಗೆ ವಿದ್ವಾಂಸರು ಮಂಡಿಸಿದ ವಿಚಾರದ ಮಂಥನದ ಫಲಶೃತಿಯೇ ಈ ಕೃತಿ.

ವೈದ್ಯಕೀಯ, ಕೃಷಿ, ನೀರಾವರಿ, ವಿದ್ಯುತ್, ಕೈಗಾರಿಕೆ, ಉದ್ಯೋಗ, ಶಿಕ್ಷಣ, ಆರೋಗ್ಯ, ವಿಜ್ಞಾನ, ತಂತ್ರಜ್ಞಾನ, ಸಂಸ್ಕೃತಿ, ಭಾಷೆ, ಸಾಮಾಜಿಕ ಹಾಗೂ ಆರ್ಥಿಕ ಅಸಮಾನತೆ - ಹೀಗೆ ಹಲವಾರು ಕ್ಷೇತ್ರಗಳಲ್ಲಿರುವ ಸಮಸ್ಯೆಗಳು ಭವಿಷ್ಯದ ಕರ್ನಾಟಕದ ಸವಾಲುಗಳಾಗಿವೆ. ಆಯಾಯಾ ಕ್ಷೇತ್ರದ ಪರಿಣತ ತಜ್ಞರು ನಿಜವಾದ ಸಮಸ್ಯೆ ಹಾಗೂ ಸವಾಲುಗಳನ್ನು ಆಳವಾಗಿ ಅಧ್ಯಯನ ಮಾಡಿ ಅವುಗಳಿಗೆ ವಸ್ತುನಿಷ್ಠವಾದ, ವೈಜ್ಞಾನಿಕವಾದ ಪರಿಹಾರವನ್ನು ಕಂಡು ಹಿಡಿಯುವುದರ ಮುಖಾಂತರ ಭವಿಷ್ಯದ ಕರ್ನಾಟಕವನ್ನು ರೂಪಿಸಬೇಕಾಗಿದೆ. ಈ ವಿಚಾರಸಂಕಿರಣವನ್ನು ಉದ್ಘಾಟಿಸಿದ ಕರ್ನಾಟಕದ ಮಾಜಿ ಮುಖ್ಯಮಂತ್ರಿ ಸನ್ಮಾನ್ಯ ಶ್ರೀ ರಾಮಕೃಷ್ಣ ಹೆಗಡೆ ಅವರು ಈ ಸಂದರ್ಭದಲ್ಲಿ ಹೇಳಿದ ಮಾತುಗಳು ಈ ನಿಟ್ಟಿನಲ್ಲಿ ಇಲ್ಲಿ ಉಲ್ಲೇಖನೀಯವಾಗಿವೆ:

"ಯಾವುದೇ ಒಂದು ರಾಜ್ಯ ಆರ್ಥಿಕವಾಗಿ ಪ್ರಗತಿ ಸಾಧಿಸಬೇಕಾದರೆ ಆ ರಾಜ್ಯದಲ್ಲಿ ರಾಜಕೀಯ ಸ್ಥಿರತೆ ಇರಬೇಕು. ರಾಜಕೀಯ ಸ್ಥಿರತೆ ಎಂದರೆ ರಾಜಕೀಯ ವ್ಯಕ್ತಿಯೊಬ್ಬನ ಸ್ಥಿರತೆ ಅಲ್ಲ. ಚುನಾವಣೆಯಲ್ಲಿ ಗೆದ್ದ ರಾಜಕೀಯ ಪಕ್ಷದ ಸರ್ಕಾರವೊಂದು ಆ ರಾಜ್ಯದ ಅನಿರ್ದಿಷ್ಟ ಅವಧಿಯ ಭವಿಷ್ಯ ಕುರಿತು ರೂಪಿಸುವ ಯೋಜನೆಗಳನ್ನು ಜಾರಿಗೆ ತರುವುದು ಎಂದರ್ಥ. ಭಾರತ ಸರ್ಕಾರದ ಹೊಸ ಆರ್ಥಿಕ ನೀತಿ, ಕೈಗಾರಿಕಾ ವಿಕೇಂದ್ರೀಕರಣ ಮತ್ತು ಆರ್ಥಿಕ ಉದಾರೀಕರಣ ನೀತಿಯಿಂದ ಇಂದು ಪ್ರಗತಿ ಸಾಧ್ಯ. ರಾಜಕೀಯ ವಿಕೇಂದ್ರಿಕರಣ ಕೂಡ ಆಗಬೇಕು. ಆದರೆ ಹೊಸ ಆರ್ಥಿಕನೀತಿ ಕೆಲವು ಮುಖ್ಯವಾದ ಅಂಶಗಳನ್ನು ಹೊಂದಿರಬೇಕು. ಆರ್ಥಿಕ ನೀತಿಯಲ್ಲಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಗೆ ಪ್ರಾಧಾನ್ಯತೆ ಇರಬೇಕು. ಭಾರತ ಕೃಷಿಪ್ರಧಾನ ರಾಷ್ಟ್ರವೆಂದು ಹೇಳಿಕೊಳ್ಳುವುದಕ್ಕೆ ನಾವು ಹಿಂಜರಿಯಬೇಕಾಗಿಲ್ಲ. ಇಡೀ ಪ್ರಪಂಚಕ್ಕೇ ಆಹಾರ

ಒದಗಿಸುವ ಸಾಮರ್ಥ್ಯ ನಮ್ಮ ರಾಷ್ಟ್ರಕ್ಕಿದೆ. ಆದರೆ ಇಂದು ವ್ಯವಸಾಯಕ್ಕೆ ಪ್ರಾಧಾನ್ಯತೆ ಸಿಗುತ್ತಿಲ್ಲ. ಈ ಎಲ್ಲ ಅಂಶಗಳಿಗೆ ಕಾರಣ ಮುಖ್ಯವಾಗಿ ನಮ್ಮ ದೇಶದ ಆಡಳಿತ ಕ್ಷೇತ್ರದಲ್ಲಿ ತೀವ್ರ ಸುಧಾರಣೆ ಆಗದೆ ಇರುವುದು. ಕರ್ನಾಟಕದಂತಹ ಸಂಪದ್ಭರಿತವಾದ ರಾಜ್ಯ ಈ ರಾಷ್ಟ್ರ ಅಥವಾ ಪ್ರಂಪಚದಲ್ಲಿಯೇ ಇಲ್ಲ. ಇಲ್ಲಿಯ ಭೂಮಿ, ಖನಿಜ, ಸಂಪತ್ತು, ಸಾಹಿತ್ಯ, ಸಂಸ್ಕೃತಿ, ಕಲೆ ಇವು ಬೇರೆಲ್ಲೂ ಇಲ್ಲ. ಈ ಸಮೃದ್ಧವಾದ ನಾಡು, ನುಡಿ, ಕಲೆಯ ಬಗ್ಗೆ ಕನ್ನಡಿಗರು ಅಭಿಮಾನವನ್ನು, ಸಾಹಸೀ ಮನೋಭಾವವನ್ನು ಬೆಳೆಸಿಕೊಳ್ಳಬೇಕು. ಕನ್ನಡಿಗರು ಆಧುನಿಕತೆಯ ತಂತ್ರಜ್ಞಾನದ ಕಿಟಕಿ ಬಾಗಿಲುಗಳನ್ನು ಮುಚ್ಚಿ ಕೂರಬಾರದು. ಯೋಜನೆಗಳನ್ನು ಸರ್ಕಾರ ಅನುಷ್ಠಾನಗೊಳಿಸುವ ವಿಷಯದಲ್ಲಿ ಭಿನ್ನಾಭಿಪ್ರಾಯಕ್ಕೆ ಅವಕಾಶ ಕೊಡಬಾರದು. ಪಕ್ಷಬೇಧ, ವ್ಯಕ್ತಿವೈಷಮ್ಯವನ್ನು ಮರೆತು ರಾಜ್ಯದ ಪ್ರಗತಿಯನ್ನು ಕಾಯ್ದುಕೊಳ್ಳಬೇಕು. ಈ ವಿಷಯದಲ್ಲಿ ರಾಜಕಾರಣಿಗಳ ಮತ್ತು ರಾಜಕೀಯ ಪಕ್ಷಗಳ ನಡುವೆ ತಾತ್ವಿಕವಾದ ಒಪ್ಪಂದ ಏರ್ಪಟ್ಟರೆ ಕರ್ನಾಟಕದ ಭವಿಷ್ಯ ಉಜ್ವಲವಾಗಲಿದೆ'' ಎಂಬ ಅವರ ಈ ಮಾತುಗಳು ಗಮನಾರ್ಹ.

ಇದೇ ಸಂದರ್ಭದಲ್ಲಿ ಗ್ರಾಮೀಣ ಹಾಗೂ ಪಂಚಾಯತ್‌ರಾಜ್ ಸಚಿವರಾದ ಶ್ರೀ ಎಂ. ಪಿ. ಪ್ರಕಾಶ್ ಅವರು ''ನಾವು ರೂಪಿಸುವ ಯೋಜನೆಗಳು ಜನಸಾಮಾನ್ಯರಿಗೆ ಉಪಯೋಗವಾಗಬೇಕು. ನಮ್ಮ ಸುತ್ತಲಿನ ಪರಿಸರ, ಸಂಸ್ಕೃತಿ ಹಾಗೂ ಜೀವಸಂಕುಲಗಳ ನಡುವೆ ಮಾನವ ತನ್ನ ಆತ್ಮಗೌರವವನ್ನು ಕಾಯ್ದುಕೊಳ್ಳಬೇಕು. ಸಮಾನತೆಯ ಬದುಕನ್ನು ರೂಪಿಸಿಕೊಳ್ಳಬೇಕು. ಈ ನಿಟ್ಟಿನಲ್ಲಿ ಕರ್ನಾಟಕದಲ್ಲಿ ಪ್ರಥಮಬಾರಿಗೆ ಪಂಚಾಯತ್‌ರಾಜ್ ವ್ಯವಸ್ಥೆಯ ಮೂಲಕ ಅಧಿಕಾರವನ್ನು ಜನಸಾಮಾನ್ಯರ ಕೈಗೆಕೊಟ್ಟು ಇತಿಹಾಸವನ್ನು ಪುನರ್ ಸೃಷ್ಟಿಸಲಾಗುತ್ತಿದೆ'' ಎಂದು ಹೇಳಿದ ಅವರು ಸಾಮಾಜಿಕ ಮತ್ತು ಆರ್ಥಿಕ ಸಮಾನತೆಯನ್ನು ತರಲು ಪ್ರಸ್ತುತ ಪಂಚಾಯತ್‌ರಾಜ್ ವ್ಯವಸ್ಥೆಯು ಸಹಕಾರಿಯಾಗಿದೆ ಎಂದರು.

ಪ್ರಸ್ತುತ ಸಂಚಿಕೆಯಲ್ಲಿರುವ ಲೇಖನಗಳು ಅಧ್ಯಯನಪೂರ್ಣವಾಗಿರುವುದರೊಂದಿಗೆ ಕರ್ನಾಟಕದ ಸಂಸ್ಕೃತಿಯ ವ್ಯಾಪ್ತಿಯೊಳಗೆ ಸಮರ್ಥವಾಗಿ ವಿವೇಚಿಸುತ್ತವೆ. ಕರ್ನಾಟಕದ ಸಮಗ್ರ ಅಧ್ಯಯನಕ್ಕೆ ಈ ಲೇಖನಗಳು ಸಹಕಾರಿಯಾಗಿವೆ. ಈ ವಿಚಾರ ಸಂಕಿರಣದಲ್ಲಿ ಡಾ. ಪಿ. ಆರ್. ಬ್ರಹ್ಮಾನಂದ, ಡಾ. ಅಬ್ದುಲ್ ಅಜೀಜ್, ಡಾ. ಕೆ. ವಿ. ನಾರಾಯಣ, ಶ್ರೀ ಕೆ. ಎಚ್. ಶ್ರೀವಾಸ್ ಅವರು ಮಂಡಿಸಿದ ಲೇಖನಗಳಿವೆ. ಜೊತೆಗೆ ಈ ಸಂಚಿಕೆಯನ್ನು ಇನ್ನಷ್ಟು ಪ್ರಬುದ್ಧಗೊಳಿಸುವ ಸಲುವಾಗಿ ನಾಡಿನ ಖ್ಯಾತ ವಿದ್ವಾಂಸರುಗಳಿಂದ ಹಾಗೂ ವಿಷಯತಜ್ಞರಿಂದ ಬರೆಸಿದ ಇನ್ನಿತರ ಕೆಲವು ಲೇಖನಗಳು ಇದರಲ್ಲಿ ಸೇರಿವೆ. ಈ ಸಂಚಿಕೆಯನ್ನು ಸಮಗ್ರವಾಗಿ ರೂಪಿಸಲು ಸರ್ವವಿಧದಲ್ಲೂ

ಮಾನ್ಯ ಕುಲಪತಿ ಡಾ. ಚಂದ್ರಶೇಖರ ಕಂಬಾರ ಅವರ ಮತ್ತು ಕುಲಸಚಿವರಾದ ಡಾ.ಕೆ.ವಿ.ನಾರಾಯಣ ಅವರ ಸಲಹೆ ಸಹಕಾರವನ್ನು ಪಡೆದಿದ್ದೇನೆ. ಹೀಗೆ ಈ ಸಂಚಿಕೆ ಈ ಎಲ್ಲ ವಿದ್ವಾಂಸರ ನೆರವು, ಪ್ರೀತಿಯಿಂದ ರೂಪುಗೊಂಡಿದೆ. ಇವರೆಲ್ಲರಿಗೂ ನನ್ನ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ವಿಚಾರ ಸಂಕಿರಣದಲ್ಲಿ ರಾಜಕೀಯ ಮುತ್ಸದ್ಧಿ ಡಾ. ಎಸ್. ನಿಜಲಿಂಗಪ್ಪ, ಸಣ್ಣ ಕೈಗಾರಿಕಾ ಸಚಿವ ಶ್ರೀ ಎನ್. ಎಂ. ನಬಿ, ಕನ್ನಡ ವಿಶ್ವವಿದ್ಯಾಲಯದ ವಿವಿಧ ಮಂಡಲಿಗಳ ಗೌರವಾನ್ವಿತ ಸದಸ್ಯರು, ನಾಡಿನ ಆಹ್ವಾನಿತ ಪ್ರಸಿದ್ಧ ವಿದ್ವಾಂಸರು ಹಾಗೂ ಸ್ಥಳೀಯ ಆಸಕ್ತರು ಉಪಸ್ಥಿತರಿದ್ದು ಈ ಸಂಕಿರಣದ ಯಶಸ್ಸಿಗೆ ಕಾರಣರಾಗಿದ್ದಾರೆ. ಇವರೆಲ್ಲರಿಗೂ ವಿಶ್ವವಿದ್ಯಾಲಯದ ಪರವಾಗಿ ಆಭಾರಿಯಾಗಿದ್ದೇನೆ.

ಈ ಲೇಖನಗಳನ್ನು ಕಂಪೋಸ್ ಮತ್ತು ಡಿ.ಟಿ.ಪಿ.ಗೆ ಅಳವಡಿಸಿದ ಶ್ರೀಮತಿ ಡಿ. ಪ್ರಭಾ ಹಾಗೂ ಕುಮಾರಿ ಅನಿತಾ ಬೊಥೆಲೊ, ಪ್ರಕಟಣೆಯಲ್ಲಿ ಸಹಕರಿಸಿದ ಸಹಾಯಕ ನಿರ್ದೇಶಕರುಗಳಾದ ಶ್ರೀ ವೀರೇಶ ಬಡಿಗೇರ ಮತ್ತು ಶ್ರೀ ಎಚ್. ಬಿ. ರವೀಂದ್ರ, ಮುಖಪುಟ ವಿನ್ಯಾಸಕಾರ ಶ್ರೀ ಕೆ. ಕೆ. ಮಕಾಳಿ ಇವರಿಗೆಲ್ಲಾ ನನ್ನ ಕೃತಜ್ಞತೆಗಳು.

**ಡಾ. ಕರೀಗೌಡ ಬೀಚನಹಳ್ಳಿ**
ಸಂಪಾದಕ

# ಪರಿವಿಡಿ

# ವಿಜ್ಞಾನ ಹಾಗೂ ತಂತ್ರಜ್ಞಾನ

ಪ್ರೊ. ಯು. ಆರ್. ರಾವ್

ಮನುಷ್ಯಕುಲಕ್ಕೆ ದೇವರು ನೀಡಿದ ದೇಣಿಗೆಗಳಲ್ಲಿ ಜೀವದ ನಂತರ ಅತ್ಯಂತ ಮಹತ್ತರವಾದದ್ದು ತಂತ್ರಜ್ಞಾನವೆಂದು ಬಹಳ ಸಾರಿ ಹೇಳಲಾಗುತ್ತದೆ. ಮನುಷ್ಯನ ನಾಗರೀಕತೆಯ ಇತಿಹಾಸದತ್ತ ಹೊರಳಿ ನೋಡಿದರೆ ಕೇವಲ ಕಳೆದ ೪೦೦೦ ವರ್ಷಗಳಲ್ಲಿ, ಅಂದರೆ ಮನುಷ್ಯ ಕುಲದ ಅಸ್ತಿತ್ವದ ಪ್ರತಿಶತ ೦.೧ ಅವಧಿಯಲ್ಲಿ ಮಾತ್ರ ಮನುಷ್ಯ ಹೊಸ ಸಾಧನ, ಉಪಕರಣಗಳ ಆವಿಷ್ಕಾರ ಮಾಡಿಕೊಂಡು ಜೀವನದ ಗುಣಮಟ್ಟದಲ್ಲಿ ಗಣನೀಯವಾದ ಸುಧಾರಣೆಗಳನ್ನು ಮಾಡಿಕೊಂಡಿದ್ದು, ವ್ಯವಸ್ಥಿತವಾದ ಕೃಷಿ ಪದ್ಧತಿಯನ್ನು ಹಾಗೂ ಸಾಮುದಾಯಿಕ ಜೀವನವನ್ನು ರೂಪಿಸಿಕೊಂಡಿದ್ದು ನಮಗೆ ಕಂಡುಬರುತ್ತದೆ. ವಿದ್ಯುಚ್ಛಕ್ತಿ, ಕ್ವಾಂಟಮ್ ಮೆಕ್ಯಾನಿಕ್ಸ್, ಅಣುತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ರೇಡಿಯೋ ಸಂವಹನ, ಗಣಕಯಂತ್ರಗಳು ಮತ್ತು ಬಾಹ್ಯಾಕಾಶ ತಂತ್ರಜ್ಞಾನ ಇಂತಹ ಗಮನಾರ್ಹವಾದ ಆಧುನಿಕ ವೈಜ್ಞಾನಿಕ, ತಾಂತ್ರಿಕ ಬೆಳವಣಿಗೆಗಳು ಈ ಶತಮಾನದಲ್ಲಿ ನಡೆದ ವೈಜ್ಞಾನಿಕ ಪ್ರಯತ್ನಗಳ ಫಲಗಳಾಗಿವೆ. ಶಿಲಾಯುಗದ ಮಾನವನಿಂದ ಶಿಲಾ ಉಪಕರಣಗಳ ಆವಿಷ್ಕಾರ ಮತ್ತು ಅಗ್ನಿ ಹಾಗೂ ಶಿಲೆಯ ಸಂಯುಕ್ತ ಬಳಕೆ, ಔದ್ಯೋಗಿಕ ಕ್ರಾಂತಿ, ಅಣುಯುಗ ಹಾಗೂ ಬಾಹ್ಯಾಕಾಶ ಯುಗದ ಅನುಷ್ಠಾನ-ಇಂಥ ಪ್ರತಿಯೊಂದು ಪ್ರಮುಖ ತಾಂತ್ರಿಕ ಪ್ರಗತಿಯೂ ಮಾನವ ಸಮಾಜದ ಭೌತಿಕ ಹಾಗೂ ಸಾಂಸ್ಕೃತಿಕ ಬೆಳವಣಿಗೆಯ ಮೇಲೆ ಆಳವಾದ ಮಹತ್ವಪೂರ್ಣವಾದ ಪರಿಣಾಮವನ್ನು ಬೀರಿದೆ.

ಕಳೆದ ಕೆಲವು ದಶಕಗಳಲ್ಲಿ ಆಗಿರುವ ಆವಿಷ್ಕಾರಗಳು ಬೆರಗುಗೊಳಿಸುವಂತಹವು. ಆದರೆ ವಿಜ್ಞಾನ ಮತ್ತು ತಂತ್ರಜ್ಞಾನದ ನಿಜವಾದ ಪ್ರಯೋಜನ ವಿಶ್ವದ ಪ್ರತಿಶತ ೨೦ ರಷ್ಟು ಸಂಪನ್ಮೂಲಗಳ ಮೇಲೆ ವಿಶ್ವದ ಪ್ರತಿಶತ ೮೦ ರಷ್ಟು ಜನಸಂಖ್ಯೆಯನ್ನು ಪೋಷಿಸುತ್ತಿರುವ ತೃತೀಯ ಜಗತ್ತಿನ ಅಭಿವೃದ್ಧಿಪರ ರಾಷ್ಟ್ರಗಳ ಬಹುಪಾಲು ಜನರಿಗೆ ಲಭ್ಯವಾಗುತ್ತಿಲ್ಲ ಎನ್ನುವುದು ಕೂಡ ವಾಸ್ತವ ಸಂಗತಿಯಾಗಿದೆ. ಆಹಾರ ಪೌಷ್ಟಿಕಾಂಶಗಳ ಕೊರತೆಯಿಂದ ಬಳಲಿ ಪ್ರತಿದಿನವೂ ಹಸಿದ ಹೊಟ್ಟೆಗಳ ಮೇಲೆ ನಿದ್ದೆ

ಹೋಗುವ ನಮ್ಮ ದೇಶದ ಲಕ್ಷಾಂತರ ಜನರ ಭೀಕರ ಚಿತ್ರ ಈ ದೇಶದ ಜೀವನದ ಗುಣಮಟ್ಟದ ಮೇಲೆ ಒಂದು ವ್ಯಾಖ್ಯಾನವೇ ಆಗಿದೆ. ವ್ಯಾಪಕವಾದ ಅನಕ್ಷರತೆ, ಕಡು ಬಡತನ, ಹರಡುತ್ತಿರುವ ರೋಗಗಳು ಮತ್ತು ಪರಿಸರದ ನಾಶ ಇವುಗಳು ನಮ್ಮ ಸಾಮಾನ್ಯ ಬದುಕಿನ ಭಾಗಗಳಾಗಿಬಿಟ್ಟಿವೆ. ಭಾರತ ದೇಶದಲ್ಲಿ ಶ್ರೇಷ್ಠ ಪ್ರಾಚೀನ ವೈಜ್ಞಾನಿಕ ಪರಂಪರೆಯಗಳಿದ್ದರೂ ಕೂಡ ವಿಜ್ಞಾನ ಹಾಗೂ ತಂತ್ರಜ್ಞಾನದ ಅಭಿವೃದ್ಧಿ ಮತ್ತು ಅನ್ವಯಿಕೆಯಲ್ಲಿ ಖಚಿತವಾದ ದೃಷ್ಟಿ ಕೇಂದ್ರವಿಲ್ಲದೇ ಇರುವುದು, ತಂತ್ರಜ್ಞಾನದ ಕ್ಷೇತ್ರದಲ್ಲಿರಲಿ ಅಥವಾ ಸಾಮಾಜಿಕ ವ್ಯವಸ್ಥೆಗಳಲ್ಲಿಯೇ ಇರಲಿ ಗುಣಮಟ್ಟದ ವಿಷಯದಲ್ಲಿ ಸುಲಭವಾಗಿ ರಾಜಿ ಮಾಡಿ ಕೊಳ್ಳಲು ಸಿದ್ಧವಾಗಿರುವ, ಅತಿ ಸಹನಶೀಲವಾದ ದೈವವಾದ-ಇವುಗಳಿಂದಾಗಿ ನಮ್ಮ ಸಮಾಜ ಗತಕಾಲದ ಸ್ಮಾರಕಗಳ ಬಂಧನದಲ್ಲಿಯೇ ಮುಂದುವರೆಯುತ್ತಿದೆಯೆ ಹೊರತು ಭವಿಷ್ಯದ ತಂತ್ರಜ್ಞಾನದ ಸವಾಲುಗಳನ್ನು ಎದುರಿಸುವ ಸಾಮರ್ಥ್ಯವನ್ನು ಪಡೆದಿಲ್ಲ. ಆಧುನಿಕ ವಿಜ್ಞಾನದ ಪುನಶ್ಚೇತನವನ್ನು ಆರಂಭಿಸಿದ ಪಂಡಿತ ಜವಾಹರಲಾಲ್ ನೆಹರು ಅವರು ಧೃಢವಾಗಿ ನಂಬಿದ್ದೇನೆಂದರೆ "ಹಸಿವು, ಬಡತನ, ನೈರ್ಮಲ್ಯದ ಕೊರತೆ, ಅನಕ್ಷರತೆ, ಮೂಢನಂಬಿಕೆ, ನಿರ್ಜೀವಗೊಳಿಸುವ ಸಂಪ್ರದಾಯ ಹಾಗೂ ಕಟ್ಟಳೆಗಳು, ಅಪಾರವಾದ ಸಂಪನ್ಮೂಲಗಳು ಪಾಳು ಬೀಳುತ್ತಿರುವುದು, ಅಲ್ಲದೇ ನಮ್ಮದು ಆಹಾರಕ್ಕೆ ಗತಿಯಿಲ್ಲದ ಜನರು ಬದುಕುವ ಒಂದು ಸಂಪದ್ಭರಿತ ದೇಶವಾಗಿರುವ ವಿಪರ್ಯಾಸ - ಇಂಥ ಸಮಸ್ಯೆಗಳನ್ನು ಕೇವಲ ವಿಜ್ಞಾನ ಮಾತ್ರ ಬಗೆಹರಿಸಬಲ್ಲದು". ಆದರೆ ಈಗಲೂ ಕೂಡ ಬಾಹ್ಯಾಕಾಶ, ಅಣುಶಕ್ತಿ ಮತ್ತು ಕೃಷಿ ಇಂಥ ಕೆಲವು ಕ್ಷೇತ್ರಗಳನ್ನು ಹೊರತುಪಡಿಸಿದರೆ ಇತರ ಕ್ಷೇತ್ರಗಳಲ್ಲಿ ನಮ್ಮ ಸಮಾಜದ ಸಾಮಾನ್ಯ ಬದುಕಿನ ಮೇಲೆ ವಿಜ್ಞಾನ ಹಾಗೂ ತಂತ್ರಜ್ಞಾನದ ಅನ್ವಯಿಕೆಯ ಪರಿಣಾಮ ಕಂಡುಬರುತ್ತಿಲ್ಲ.

ಸಮಾಜದ ಸಗಾತ್ರ ಬದಲಾವಣೆ ಮಾತ್ರವಲ್ಲ ಅದರ ಅಸ್ತಿತ್ವವು ಕೂಡ ವಿಜ್ಞಾನ ಹಾಗೂ ತಂತ್ರಜ್ಞಾನದ ಗರಿಷ್ಠ ಬಳಕೆಯನ್ನು ಅವಲಂಬಿಸಿದೆಯೆನ್ನುವುದನ್ನು ಒಪ್ಪುವುದಾದರೆ ನಮ್ಮೆಲ್ಲರ ಮುಂದಿರುವ ಸವಾಲೆಂದರೆ ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಂಡು ಅದು ನಮ್ಮ ಸಮಾಜದ ಸಾಂಸ್ಕೃತಿಕ ಚೌಕಟ್ಟಿನೊಳಗೆ ಬೆರತುಕೊಳ್ಳುವಂತೆ ಶ್ರದ್ಧೆಯಿಂದ ದುಡಿಯುವುದಾಗಿದೆ. ಕಾಲದ ಗತಿಶೀಲತೆಗೆ ಪರ್ಯಾಯವಾಗಿ ವಿಜ್ಞಾನ ಮಾಡಿದ ಕ್ಷಿಪ್ರ ಪ್ರಗತಿಯಿಂದಾಗಿ ಹುಟ್ಟಿಕೊಂಡ ಸವಾಲುಗಳನ್ನು ಗುರುತಿಸಿದಾಗ ಮಾತ್ರ ವಿಜ್ಞಾನ ಹಾಗೂ ತಂತ್ರಜ್ಞಾನದ ಅನ್ವಯಿಕೆಯಿಂದ ದೊರೆಯುವ ಪ್ರಯೋಜನಗಳ ವಾಸ್ತವಿಕ ಅರಿವು ನಮಗೆ ಬರುತ್ತದೆ. ತಂತ್ರಜ್ಞಾನವು ಬಹಳ ತ್ವರಿತವಾಗಿ ಬಳಕೆಯಳಿವುದರಿಂದಾಗಿ ಸಮಾಜವು ಸತತವಾಗಿ

ಬೌದ್ಧಿಕ ಹೊಂದಾಣಿಕೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಇಲ್ಲದೇ ಇದ್ದಲ್ಲಿ ಅಂಥ ತಂತ್ರಜ್ಞಾನ ಶಕ್ತಿಹೀನ ಪಳೆಯುಳಿಕೆಯಾಗಿ ಬಿಡುತ್ತದೆ. ಆರ್ಥಿಕ ಹಾಗೂ ವೈಜ್ಞಾನಿಕ ಮೌಲ್ಯೀಕರಣವನ್ನು ಆಧರಿಸಿ ದೊಡ್ಡ ಹೆಜ್ಜೆಗಳನ್ನು ತಂತ್ರಜ್ಞಾನದ ಕ್ಷೇತ್ರದಲ್ಲಿ ಇಡಲು ನಾವು ಸಿದ್ಧವಾಗಿರದಿದ್ದಲ್ಲಿ ಸದ್ಯದ ಸ್ಥಿತಿಯನ್ನು ಬದಲಾಯಿಸುವ ನಮ್ಮ ಪ್ರಯತ್ನದಲ್ಲಿ ನಾವು ಸೋಲುವುದು ಖಂಡಿತ.

**ಭಾರತದ ಸನ್ನಿವೇಶ**

ಅತಿಯಾದ ರಾಜಕೀಯ ಅವಕಾಶವಾದಿತ್ವದ ಇಂದಿನ ಸನ್ನಿವೇಶದಲ್ಲಿ ಸಾಮಾಜಿಕ ನ್ಯಾಯದ ಹೆಸರಿನಲ್ಲಿ ಅಲ್ಪಾವಧಿ ವೈಯಕ್ತಿಕ ಲಾಭಗಳನ್ನು ಮಾತ್ರ ಮನಸ್ಸಿನಲ್ಲಿ ಇಟ್ಟುಕೊಂಡು ಅಷ್ಟೇನು ಪ್ರಯೋಜನವಿಲ್ಲದ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತದೆ. ಇದರಿಂದಾಗಿ ಜೀವಂತ ಮನುಷ್ಯ ವ್ಯಕ್ತಿಗಳನ್ನು ಗೌಣಗೊಳಿಸಲಾಗುತ್ತದೆ. ಅಥವಾ ಸಂಪೂರ್ಣವಾಗಿ ಕಡೆಗಣಿಸಲಾಗುತ್ತಿದೆ. ನಮ್ಮಲ್ಲಿರುವ ಸೀಮಿತವಾದ ಸಂಪನ್ಮೂಲಗಳನ್ನು ದೇಶದ ಸಂಪತ್ತನ್ನು ನಿಜವಾಗಿ ಅಭಿವೃದ್ಧಿಗೊಳಿಸಬಲ್ಲ ಶಿಕ್ಷಣಕ್ಕಾಗಿ, ವೈಜ್ಞಾನಿಕ ತಾಂತ್ರಿಕ ಪ್ರಗತಿಗಾಗಿ ವಿನಿಯೋಗಿಸುವ ಬದಲು ನಮ್ಮ ದುಂದುಗಾರ ಸಮಾಜ ನಿರುಪಯೋಗಿ ಧಾರ್ಮಿಕ ಸಂಪ್ರದಾಯಗಳ ಆಚರಣೆಯಲ್ಲಿ ಅವನ್ನು ವ್ಯಯ ಮಾಡುತ್ತದೆ; ಬದುಕಿರುವವರ ಹಸಿದ ಹೊಟ್ಟೆಗಳ ಬಗ್ಗೆ ಕಾಳಜಿ ತೋರಿಸುವ ಬದಲಾಗಿ ಸತ್ತವರಿಗೆ ದೊಡ್ಡ ಸ್ಮಾರಕಗಳನ್ನು ಕಟ್ಟಿಸುವುದರಲ್ಲಿ ಧನ್ಯತೆ ಕಾಣುತ್ತದೆ. ವರ್ತಮಾನದ ಬದಲಾಗಿ ಭೂತಕಾಲದ ಬಗ್ಗೆ ಮಾತ್ರ ಮಾತನಾಡುವ ದೇಶ ನಮ್ಮದಾಗಿದೆ. ಎಲ್ಲ ವಿಷಯಗಳ ಬಗ್ಗೆ ನೈತಿಕತೆಯ ಹುಸಿ ಧೋರಣೆಯನ್ನು ತೋರುತ್ತಲೇ ವಾಸ್ತವದಲ್ಲಿ ಅನೈತಿಕ ಚಟುವಟಿಕೆಗಳಲ್ಲಿ ನಾವು ತೊಡಗಿರುತ್ತೇವೆ. ಆದರೆ ನಮ್ಮ ಸಾಮಾಜಿಕ-ರಾಜಕೀಯ ವ್ಯವಸ್ಥೆಯಲ್ಲಿ ಅಪರಾಧಿ ಚಟುವಟಿಕೆಗಳಿಗೆ ಇಂಬು ಮಾಡಿಕೊಡುತ್ತೇವೆ. ನಮ್ಮ ಅತ್ಯಂತ ಅಮೂಲ್ಯವಾದ ಮಾನವೀಯ ಸಂಪನ್ಮೂಲವನ್ನು ಬೆಳೆಸುವ ಪ್ರಜ್ಞಾ ಪೂರ್ವಕ ಪ್ರಯತ್ನವನ್ನು ನಾವು ಮಾಡಿ ಪ್ರತಿಭೆ, ಸ್ವಂತಿಕೆ, ಸ್ವತಂತ್ರ ಚಿಂತನೆಗಳನ್ನು ಅರಳಿಸಬಲ್ಲಂಥ ಆರೋಗ್ಯಕರವಾದ ವಾತಾವರಣವನ್ನು ಸೃಷ್ಟಿಸುವವರೆಗೆ ವಿಜ್ಞಾನಿಗಳ ಪ್ರತಿಭಾ ಪಲಾಯನ, ಅಸಂಖ್ಯಾತ ಶಿಕ್ಷಿತ ಜನರ ನಿರುದ್ಯೋಗ ಇವೇ ಮುಂತಾದ ಭೀಕರ ಸಮಸ್ಯೆಗಳು ನಮ್ಮನ್ನು ಕಾಡುತ್ತಲೇ ಇರುತ್ತವೆ.

ಇಂಥ ಎಲ್ಲಾ ಬಿಕ್ಕಟ್ಟುಗಳ ಮಧ್ಯೆಯೂ ವಿಜ್ಞಾನ ಹಾಗೂ ತಂತ್ರಜ್ಞಾನದಂಥ ಕೆಲವು ಆಯ್ದ ಕ್ಷೇತ್ರಗಳಲ್ಲಿ ಕಳೆದ ಐದು ದಶಕಗಳಲ್ಲಿ ಸಾಧಿಸಲಾದ ಪ್ರಗತಿಯಿಂದ ನಮ್ಮ ದೇಶ ಗಮನಾರ್ಹವಾದ ಸಾಧನೆಯನ್ನು ಮಾಡಿದೆಯೆನ್ನುವುದನ್ನು ಅಲ್ಲಗಳೆಯಲಾಗದು. ಇದರ ಬೆಂಬಲವಿಲ್ಲದಿದ್ದರೆ ಹೆಚ್ಚು ಕಡಿಮೆ ಸ್ವಾವಲಂಬನದ ಸ್ಥಿತಿಯನ್ನು ನಾವು

ತಲುಪುವುದು ಸಾಧ್ಯವಾಗುತ್ತಿರಲಿಲ್ಲ. ಹಸಿರು ಕ್ರಾಂತಿಯಿಂದಾಗಿ ಐವತ್ತರ ದಶಕದಲ್ಲಿ ೫೫ ಮಿಲಿಯ ಟನ್ ಮಾತ್ರವಾಗಿದ್ದ ವಾರ್ಷಿಕ ಕೃಷಿ ಉತ್ಪಾದನೆ ೧೮೦ ಮಿಲಿಯ ಟನ್‌ಗಳನ್ನು ತಲುಪಿದೆ. ವ್ಯವಸ್ಥಿತವಾದ ವಿದ್ಯುಚ್ಛಕ್ತಿ ಉತ್ಪಾದನೆ, ಕಚ್ಚಾ ತೈಲದ ಉತ್ಪನ್ನ, ಸರಕುಗಳ ಮತ್ತು ಔದ್ಯೋಗಿಕ ಸರಕುಗಳ ಉತ್ಪಾದನೆ ಮತ್ತು ಒಟ್ಟು ರಾಷ್ಟ್ರೀಯ ಉತ್ಪನ್ನ ಈ ಆರ್ಥಿಕ ಸೂಚ್ಯಾಂಕಗಳಲ್ಲಿ ಕಳೆದ ನಾಲ್ಕು ದಶಕಗಳಲ್ಲಿ ಹತ್ತು ಪಟ್ಟಿನ ಹೆಚ್ಚಳವಾಗಿದೆ ಮತ್ತು ಈ ಹೆಚ್ಚಳಕ್ಕೆ ದೇಶದ ಪ್ರಧಾನ ಧಾರೆಯ ಚಟುವಟಿಕೆಗಳಲ್ಲಿ ನಾವು ಮಾಡಿದ ವೈಜ್ಞಾನಿಕ ಹೂಡುವಿಕೆಯೇ ಕಾರಣವಾಗಿವೆ. ದೇಶದ ಅತ್ಯಂತ ದೂರದ ಮೂಲೆಯಲ್ಲಿರುವ ಸ್ಥಳಗಳೊಂದಿಗೆ ಸಂಪರ್ಕ ಸಾಧ್ಯವಾಗುವಂತೆ ಮಾಡಿದ ಸಂವಹನಾ ಕ್ರಾಂತಿಯನ್ನು ತಂದಿದ್ದು ಮಾತ್ರವಲ್ಲ, ತುರ್ತು ಸಂವಹನೆ, ನೈಸರ್ಗಿಕ ಅವಘಡಗಳ ಬಗ್ಗೆ ಮುನ್ಸೂಚನೆ ಕೊಡುವುದು, ಮಾಹಿತಿ ಪ್ರಸರಣ ಇವುಗಳನ್ನು ಸಾಧ್ಯಮಾಡಿದ್ದು ನಮ್ಮ ಬಾಹ್ಯಾಕಾಶ ಉಪಗ್ರಹಗಳು. ಸೂಕ್ತವಾದ ಕಾಲಾವಧಿಯಲ್ಲಿ ಅನಕ್ಷರತೆಯನ್ನು ನಿವಾರಿಸುವ ಸಾಮರ್ಥ್ಯವುಳ್ಳ ತೆರಪಿನ ಶಿಕ್ಷಣವನ್ನು ಪ್ರಬಲವಾದ ವಾಕ್-ದೃಶ್ಯ ಮಾಧ್ಯಮವಾದ ದೂರದರ್ಶನದ ಮೂಲಕ ಕೊಡಬಲ್ಲ ಸಾಧ್ಯತೆಯನ್ನು ನಮ್ಮ ಉಪಗ್ರಹ ದೂರದರ್ಶನ ನಮಗೆ ತಂದುಕೊಟ್ಟಿದೆ. ಅರಣ್ಯ, ಕೃಷಿ, ಮಣ್ಣು, ಅಂತರ್ಜಲ ಮತ್ತು ಜಲ ಸಂಪನ್ಮೂಲಗಳು , ಬಂಜರು ಭೂಮಿ, ಖನಿಜಗಳು, ಪರ್ಯಾವರಣ, ನಗರಾಭಿವೃದ್ಧಿ, ಸಾಗರ ಸಂಪನ್ಮೂಲಗಳು, ಹವಾಮಾನ, ನೆರೆ ಮತ್ತು ಕ್ಷಾಮದ ವಿಕೋಪಗಳು ಇವುಗಳ ನಿರ್ವಹಣೆಯಲ್ಲಿ ದೂರ ಸಂವೇದಿ ಉಪಗ್ರಹಗಳನ್ನು ವ್ಯಾಪಕವಾಗಿ ಬಳಸಲಾಗುತ್ತಿದೆ.

**ಭವಿಷ್ಯದ ಸವಾಲುಗಳು**

ಅತ್ಯಂತ ಆಶಾದಾಯಕವಾದ ಅಂದಾಜಿನ ಪ್ರಕಾರ ಕೂಡ ೨೦೨೦ ಇಸ್ವಿಯ ಹೊತ್ತಿಗೆ ಭಾರತದ ಜನಸಂಖ್ಯೆ ೧ ಶತಕೋಟಿಯನ್ನು ದಾಟಿ ೨೦೫೦ ನೆ ಇಸ್ವಿಯ ಹೊತ್ತಿಗೆ ೧.೮ ಶತಕೋಟಿಗೆ ಸ್ಥಿರಗೊಳ್ಳುತ್ತದೆ. ಇದರಿಂದಾಗಿ ನಮ್ಮ ಆಹಾರ ಧಾನ್ಯದ ಉತ್ಪಾದನೆಯನ್ನು ಕೊನೇಪಕ್ಷ ದ್ವಿಗುಣಗೊಳಿಸುವ ಮೂಲಕ ಭವಿಷ್ಯದ ತಲೆಮಾರುಗಳ ಕನಿಷ್ಟ ಅವಶ್ಯಕತೆಯನ್ನು ಪೂರೈಸಬೇಕಾಗುತ್ತದೆ. ತಲಾ ಭೂಹಿಡುವಳಿ ಕೇವಲ ೦.೧೭ ಹೆಕ್ಟೇರು ಎನ್ನುವುದನ್ನು ಗಮನಿಸಿದರೆ ಇದು ಭಗೀರಥ ಪ್ರಯತ್ನವೇ ಸರಿ. ನಮ್ಮ ಅರಣ್ಯ ನೀತಿ ಗೊತ್ತುವಳಿಯಲ್ಲಿ ಅತ್ಯುತ್ಸಾಹದಿಂದ ಘೋಷಣೆ ಮಾಡಿದ ಪ್ರತಿಶತ ೩೩ ರಷ್ಟು ಅರಣ್ಯ ಆವರಣದ ಉದ್ದೇಶಿತ ಗುರಿಗೆ ವ್ಯತಿರಿಕ್ತವಾಗಿ ಇಂದು ವ್ಯಾಪಕವಾದ ಅರಣ್ಯ ವಿನಾಶದಿಂದಾಗಿ ಒಟ್ಟು ಭೌಗೋಳಿಕ ಕ್ಷೇತ್ರದ ಪ್ರತಿಶತ ೧೧ ರಷ್ಟು ಮಾತ್ರ ಅರಣ್ಯ ಆವರಣವನ್ನು ಹೊಂದಿದೆ. ನಮ್ಮ ದೇಶದ ಪ್ರಮುಖ ನದಿಗಳು ಅತ್ಯಂತ ಕಲುಷಿತವಾದ

ಮಡ್ಡಿಯ ವಾಹಕಗಳಾಗಿವೆ. ಪವಿತ್ರ ಗಂಗಾ ಮತ್ತು ಬ್ರಹ್ಮಪುತ್ರ ನದಿಗಳೇ ಜಗತ್ತಿನ ಉಳಿದ ಎಲ್ಲಾ ನದಿಗಳ ಒಟ್ಟು ಮಡ್ಡಿಯ ಪ್ರತಿಶತ ೨೦ ರಷ್ಟು ಮಡ್ಡಿಯನ್ನು ಹೊಂದಿದೆ. ಹಸಿರು ಕ್ರಾಂತಿಯ ನಂತರವೂ ದೇಶದ ಕೃಷಿ ಉತ್ಪಾದನಾ ಸಾಮರ್ಥ್ಯ ಪ್ರತಿ ಹೆಕ್ಟೇರಿಗೆ ೧.೬ ಟನ್ ಮಾತ್ರವಾಗಿದ್ದು ವಿಶ್ವದಲ್ಲಿಯೇ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಒಂದಾಗಿದೆ. ವಿಶ್ವದ ಅತ್ಯುತ್ತಮ ಪ್ರಮಾಣ ಹೆಕ್ಟೇರಿಗೆ ೫ ಟನ್ನುಗಳಾಗಿದ್ದು, ಇದು ವಿಶ್ವದ ಸರಾಸರಿಯಾದ ಹೆಕ್ಟೇರಿಗೆ ೨.೬ ಟನ್‌ಗಳ ಪ್ರಮಾಣಕ್ಕಿಂತ ಬಹಳ ಕಡಿಮೆಯಾಗಿದೆ. ಮೇಲ್ ಮಣ್ಣು ಮತ್ತು ಜಲಸಂಪನ್ಮೂಲಗಳ ನಿರ್ವಹಣೆ ಅದೆಷ್ಟು ಶೋಚನೀಯವಾಗಿದೆಯೆಂದರೆ ಒಟ್ಟು ಸಾಗುವಳಿ ಭೂಮಿಯ ಕಾಲು ಭಾಗದಷ್ಟು ಸಮಸ್ಯಾತ್ಮಕ ಭೂಮಿಯಾಗಿಬಿಟ್ಟಿದ್ದು ಅಷ್ಟೇ ಪ್ರಮಾಣದ ಭೂಮಿ ಕನಿಷ್ಟ ಉತ್ಪಾದನಾ ಸಾಮರ್ಥ್ಯ ಹೊಂದಿದೆ. ಹಸಿರು ಕ್ರಾಂತಿಯ ಪ್ರತಿಕೂಲ ಪರಿಣಾಮವೆಂದರೆ ಜವುಗು ಹಿಡಿಯುವಿಕೆ, ಅಸಮರ್ಪಕ ನೀರ್ಗಾಲುವೆ ವ್ಯವಸ್ಥೆ ಮತ್ತು ರಾಸಾಯನಿಕ ಗೊಬ್ಬರಗಳ ಅತಿಶಯ ಬಳಕೆಯಿಂದಾಗಿ ಒಂದು ಕಾಲದಲ್ಲಿ ಅತ್ಯಂತ ಹೆಚ್ಚಿನ ಉತ್ಪಾದನಾ ಸಾಮರ್ಥ್ಯವುಳ್ಳ ಪ್ರದೇಶಗಳು ಇಂದು ಲವಣಯುಕ್ತ ಮರುಭೂಮಿಗಳಾಗಿಬಿಟ್ಟಿವೆ. ಇವೆಲ್ಲಾ ಅಂಶಗಳಿಗೆ ಮಿಗಿಲಾಗಿ ಮಾನವಜನ್ಯ ಚಟುವಟಿಕೆಗಳಿಂದಾಗಿ 'ಹಸಿರು ಮನೆ' ಸಮತೋಲನವು ಅಸ್ಥಿರಗೊಂಡಿದ್ದರ ಪರಿಣಾಮವಾಗಿ ವಿಶ್ವದ ಉಷ್ಣಾಂಶದ ಏರಿಕೆಯ ಅಪಾಯವಿದೆ. ಈ ಅಪಾಯದಿಂದಾಗಿ ಈ ಗೃಹದ ಮೇಲಿನ ಇಡೀ ಜೈವಿಕ ಜಗತ್ತಿನ ಮೇಲೆಯೇ ಪರಿಣಾಮವಾಗುವ ಸಾಧ್ಯತೆಯಿದೆ. ಜನಸಂಖ್ಯೆಯ ಅಸ್ಫೋಟದಿಂದಾಗಿ ಮತ್ತು ಭೂಮಿ ಸಂಪನ್ಮೂಲದ ಕೊರತೆಯಿಂದಾಗಿ ಬೃಹತ್ ಪ್ರಮಾಣದ ನಗರೀಕರಣ ಅನಿವಾರ್ಯವಾಗಿಬಿಟ್ಟು ಈಗಾಗಲೇ ಕಲುಷಿತವಾದ ನಮ್ಮ ನಗರಗಳು ಬೃಹತ್ ಕೊಳೆಗೇರಿಗಳಾಗುತ್ತವೆ. ದೊಡ್ಡ ಪ್ರಮಾಣದ ಶಿಕ್ಷಣ ಪ್ರಸರಣ, ಅದರಲ್ಲೂ ಮಹಿಳಾ ಅನಕ್ಷರತೆಯ ನಿರ್ಮೂಲನ ಇಂದಿನ ಬಹುದೊಡ್ಡ ಸವಾಲಾಗಿದೆ. ಇವುಗಳಿಲ್ಲದಿದ್ದರೆ ಜನಸಂಖ್ಯಾ ನಿಯಂತ್ರಣ ಮತ್ತು ಪೌಷ್ಟಿಕ ಭದ್ರತೆ ಸಾಧ್ಯವಾಗುವುದಿಲ್ಲ. ರಿಯೋ - ಡಿ ಜನಿರೋದ ಐತಿಹಾಸಿಕ ವಿಶ್ವ ಶಿಖರ ಸಮ್ಮೇಳನದಲ್ಲಿ ಸುಂದರವಾಗಿ ಹೇಳಲಾದ ಹಾಗೆ "ಇಂದು ಮನುಕುಲ ಚರಿತ್ರೆಯ ನಿರ್ಣಾಯಕ ಗಳಿಗೆಯೊಂದರಲ್ಲಿ ನಿಂತಿದೆ. ನಮ್ಮನ್ನು ಎದುರಿಸುತ್ತಿರುವ ಸಮಸ್ಯೆಗಳೆಂದರೆ ದೇಶ ದೇಶಗಳ ಮಧ್ಯೆ, ದೇಶಗಳ ಒಳಗೆ ಅಂತರಗಳು ಶಾಶ್ವತಗೊಳ್ಳುತ್ತಿರುವುದು; ಬಡತನ, ಹಸಿವು, ಅನಾರೋಗ್ಯ ಹಾಗೂ ಅನಕ್ಷರತೆಗಳು ಉಲ್ಬಣಗೊಳ್ಳುತ್ತಿರುವುದು ಮತ್ತು ನಮ್ಮ ಅಭ್ಯುದಯಕ್ಕಾಗಿ ನಾವು ಅವಲಂಬಿಸುವ ಪರಿಸರವಲಯವು ನಿರಂತರವಾಗಿ ಹದಗೆಡುತ್ತಿರುವುದು." ಆಹಾರ, ಆರ್ಥಿಕ ಹಾಗೂ ಆರೋಗ್ಯಗಳ ಸುಭದ್ರತೆಯನ್ನು ನಾವು ಪಡೆಯುವುದಕ್ಕೆ ಒಂದೇ

ವಿಧಾನವೆಂದರೆ ವಿಜ್ಞಾನ ಹಾಗೂ ತಂತ್ರಜ್ಞಾನಗಳಿಗೆ ಮೊರೆ ಹೋಗುವುದು. ಬಾಹ್ಯಕಾಶ ಹಾಗೂ ಜೈವಿಕ ತಂತ್ರಜ್ಞಾನದ ಹೂಡುವಿಕೆಯಿಂದ ನವೀನ ಹಸಿರು ಕ್ರಾಂತಿಯನ್ನು ಆರಂಭಿಸುವುದು. ಉಪಗ್ರಹ ದೂರ ಶಿಕ್ಷಣದ ಕಾರ್ಯಕ್ರಮಗಳಿಂದ ಗ್ರಾಮೀಣ ಅನಕ್ಷರತೆಯನ್ನು ನಿರ್ಮೂಲಗೊಳಿಸುವುದು. ಇವುಗಳಿಂದ ನಮ್ಮ ಗುರಿಯನ್ನು ಸಾಧಿಸಬಹುದೇ ಹೊರತು ತತ್ವಜ್ಞಾನದ ನೀತಿ ಬೋಧನೆಯಿಂದ, ಜನಪ್ರಿಯ ಘೋಷಣೆಗಳಿಂದ ಅಥವಾ ಕುರುಡು ಆಶಾವಾದದಿಂದಲ್ಲ. ಹೀಗೆ ಮಾಡಬೇಕೆಂದರೆ ಇಂದಿನ ಮೂಲಭೂತ ಅವಶ್ಯಕತೆಗಳನ್ನು ಮಾತ್ರವಲ್ಲ ಭವಿಷ್ಯದ ತಲೆಮಾರುಗಳ ನಿರೀಕ್ಷಿತ ಅವಶ್ಯಕತೆಗಳನ್ನು ಪೂರೈಸಬಲ್ಲ ಸಮಗ್ರವಾದ, ನಿರ್ವಹಿಸಬಹುದಾದ ಹೊಸ ಅಭಿವೃದ್ಧಿ ನೀತಿಯ ಅನುಷ್ಠಾನ ಅತ್ಯಂತ ಅವಶ್ಯಕವಾಗಿದೆ. ಇದು ಪರಿಸರಪರವಾದ ವೈಜ್ಞಾನಿಕ ದೃಷ್ಟಿಕೋನದ ಸ್ವೀಕಾರದಿಂದ ಸಾಧ್ಯವಾಗಬೇಕು. ಆಗ ಮಾತ್ರ ಪ್ರಾಣಿ ಕುಲದ ನಾಶವನ್ನು ಮಾಡದೇ ತ್ವರಿತ ಪ್ರಗತಿಯನ್ನು ಸಾಧಿಸಬಹುದು.

**ಶಿಕ್ಷಣ, ಸಂಶೋಧನೆ, ಅಭಿವೃದ್ಧಿ ಮತ್ತು ಕೈಗಾರಿಕೆ**

ಆಧುನಿಕ ತಂತ್ರಜ್ಞಾನದಲ್ಲಿನ ಬೆಳವಣಿಗೆಗಳ ಪ್ರಮುಖ ಲಕ್ಷಣವೆಂದರೆ ವಿವಿಧ ಜ್ಞಾನಶಾಖೆಗಳ ಇಕ್ಕಟ್ಟಿನ ಗಡಿರೇಖೆಗಳನ್ನು ದಾಟಿಕೊಂಡು ಹೋಗುವ ಅಂತರ್ ಶಾಸ್ತ್ರೀಯ ಸ್ವಭಾವ. ೧೫ ಕೋಟಿ ಶಾಲಾ ಮಕ್ಕಳಿಗೆ ಶಿಕ್ಷಣ ಕೊಡುತ್ತಿರುವ ನಮ್ಮ ದೇಶದ ಶಾಲೆಗಳಲ್ಲಿ ಪ್ರತಿಶತ ಐವತ್ತು ಶಾಲೆಗಳಲ್ಲಿ ಗ್ರಂಥಾಲಯ, ಪ್ರಯೋಗಶಾಲೆಯ ಸೌಲಭ್ಯಗಳ ಮಾತಿರಲಿ ಕರಿಹಲಗೆಗಳೂ ಇಲ್ಲ. ಕಳೆದ ಕೆಲ ವರ್ಷಗಳಲ್ಲಿ ವಿಜ್ಞಾನ ವಿಷಯಗಳನ್ನು ಆಯ್ಕೆ ಮಾಡಿಕೊಳ್ಳುವವರ ಸಂಖ್ಯೆ ಪ್ರತಿಶತ ೩೦ ರಿಂದ ೨೦ ಕ್ಕೂ ಕಡಿಮೆಗೆ ಇಳಿದಿದೆ. ನಮ್ಮ ದೇಶದ ಒಟ್ಟು ಉತ್ಪಾದನೆಯ ಪ್ರತಿಶತ ೧ ಕ್ಕಿಂತ ಕಡಿಮೆಯಷ್ಟು ಮೊತ್ತವನ್ನು ಮಾತ್ರ ವೈಜ್ಞಾನಿಕ ಸಂಶೋಧನೆಗಾಗಿ ಮೀಸಲಿಡಲಾಗುತ್ತಿದೆ. ಇದು ಭವಿಷ್ಯದ ತಂತ್ರಜ್ಞಾನಬದ್ಧ ಸಮಾಜದ ಸೃಷ್ಟಿಗೆ ಪೂರಕವಂತೂ ಖಂಡಿತ ಅಲ್ಲ. ನಮ್ಮ ದೇಶದ ಇಂದಿನ ಶಿಕ್ಷಣ ಪದ್ಧತಿ ಸಮಕಾಲೀನ ಪ್ರಸ್ತುತತೆ ಇಲ್ಲದ ಪಠ್ಯಕ್ರಮಗಳ ಮತ್ತು ಜಡವಾದ ವಿಭಾಗೀಕರಣದ ಹೊರೆಯಿಂದ ಬಳಲುತ್ತಿದೆ. ಹೀಗಾಗಿ ಅದು ನಿಸರ್ಗದ ಅಂತರ್-ಶಾಸ್ತ್ರೀಯವೆನ್ನಬಹುದಾದ ಬಹುಮುಖತೆಯನ್ನು ಅರ್ಥಮಾಡಿಕೊಳ್ಳುವುದರಲ್ಲಿ, ವಿಜ್ಞಾನ ಮತ್ತು ತಂತ್ರಜ್ಞಾನ ದಲ್ಲಿ ಮೂರ್ತಗೊಂಡಿರುವ ಅವಿನಾ ಸಂಬಂಧಗಳನ್ನು ಗುರುತಿಸಬಲ್ಲ ಆಸಕ್ತ ವಿದ್ಯಾರ್ಥಿಗಳನ್ನು ಸೃಷ್ಟಿಸುವುದರಲ್ಲಿ ಅಸಮರ್ಥವಾಗಿದೆ. "ಬೆಳಕು, ಸ್ವಾತಂತ್ರ್ಯ ಮತ್ತು ಜ್ಞಾನಾರ್ಜನೆಯ" ಸ್ಥಾನಗಳಾಗಬೇಕಾಗಿದ್ದ ನಮ್ಮ ವಿಶ್ವವಿದ್ಯಾಲಯಗಳು ಇಂದು ದ್ವಿತೀಯ ದರ್ಜೆಯ ಜ್ಞಾನವನ್ನು ನಿಗದಿತ ಪ್ರಮಾಣದಲ್ಲಿ ಕೊಟ್ಟು ಇದನ್ನು

ಪ್ರಾಚೀನವಾದ ಪರೀಕ್ಷಾ ಪದ್ಧತಿಯಲ್ಲಿ ಪುನರುಚ್ಚಾರ ಮಾಡಿಸುವ ಕಳಪೆ ಮಟ್ಟದ ಉತ್ಪಾದನಾ ಘಟಕಗಳಾಗಿಬಿಟ್ಟಿವೆ. ವಿಜ್ಞಾನದ ಅಂತಃಸತ್ವವನ್ನು ಮತ್ತು ಉತ್ತೇಜಕತೆಯನ್ನು ಮನದಟ್ಟು ಮಾಡಿಕೊಡುವ ರೀತಿಯಲ್ಲಿ ನಮ್ಮ ಪಠ್ಯಕ್ರಮಗಳನ್ನು ನಾವು ಬದಲಾಯಿಸಿಕೊಳ್ಳದಿದ್ದಲ್ಲಿ ಮತ್ತು ಶ್ರೇಷ್ಠತೆಯ ಅತ್ಯುನ್ನತ ಮಟ್ಟವನ್ನು ಒತ್ತಾಯಿಸದಿದ್ದಲ್ಲಿ ತ್ವರಿತವಾಗಿ ಬದಲಾಗುತ್ತಿರುವ ಜಗತ್ತಿನಲ್ಲಿ ವಿಜ್ಞಾನ ನಿರ್ವಹಿಸಬೇಕಾದ ಕಾರ್ಯದಲ್ಲಿ ಭಾಗಿಗಳಾಗಬಲ್ಲ ವಿಜ್ಞಾನಿಗಳನ್ನು, ತಂತ್ರಜ್ಞರನ್ನು ಸೃಷ್ಟಿಸುವ ನಮ್ಮ ಗುರಿಯನ್ನು ಸಾಧಿಸಲಾರೆವು. ಮಹಾಕವಿ ಕುವೆಂಪು ಅವರ ಪ್ರಸಿದ್ಧ ಮಾತುಗಳನ್ನು ಇಲ್ಲಿ ನೆನಪಿಸಿಕೊಳ್ಳಬೇಕು :

**ವಿಶ್ವವಿದ್ಯಾಲಯಗಳು ಆಣೆಕಟ್ಟುಗಳಂತಲ್ಲ; ಉಕ್ಕಿನ ಅಥವಾ**
**ಹೆಂಚಿನ ಕಾರ್ಖಾನೆಗಳಂತಲ್ಲ; ಅವುಗಳಿಂದ ಹೊರ ಬೀಳುವ**
**ವಸ್ತುಗಳು ಸಜೀವವಾದುವು, ಸಚೇತನವಾದುವು;**
**ಒಂದೊಂದೂ ತನ್ನ ವಿಶಿಷ್ಟತೆಯಿಂದ ನಿರುಪಮವಾದುದು.**

ಒಂದು ವಿಶ್ವವಿದ್ಯಾಲಯದ ಮೂಲಭೂತ ಜವಾಬ್ದಾರಿಯೆಂದರೆ ಸೃಷ್ಟಿಶೀಲತೆ ಹಾಗೂ ಸ್ವೋಪಜ್ಞ ವಿಚಾರಶೀಲತೆಯನ್ನು ಪ್ರೋತ್ಸಾಹಿಸುವುದು. ವಿದ್ಯಾರ್ಥಿಗಳು ವೈಚಾರಿಕವಾಗಿ ಯೋಚಿಸುವಂತೆ, ತರ್ಕಬದ್ಧವಾಗಿ ಚಿಂತಿಸುವಂತೆ ಮತ್ತು ಹೊಸ ವಿಚಾರಗಳನ್ನು ಒಪ್ಪಿಕೊಳ್ಳಲು ಹೆದರದಂತೆ ತರಬೇತಿ ಮಾಡಬಲ್ಲ ನಿಷ್ಠಾವಂತ ಶಿಕ್ಷಕರಿಂದ ಮಾತ್ರ ಇದು ಸಾಧ್ಯವಾಗಬಲ್ಲದು. ಜಾನ್ ರಸ್ಕಿನ್ ಅವರ ಮಾತಿನಲ್ಲಿ ಹೇಳುವುದಾದರೆ "ಜನರಿಗೆ ಗೊತ್ತಿಲ್ಲದಿದ್ದನ್ನು ಕಲಿಸುವುದು ಶಿಕ್ಷಣವಲ್ಲ. ಶಿಕ್ಷಣವೆಂದರೆ ಅವರು ಹೇಗೆ ವರ್ತಿಸುತ್ತಿಲ್ಲವೋ ಹಾಗೆ ವರ್ತಿಸುವಂತೆ ಕಲಿಸಿ ಕೊಡುವುದಾಗಿದೆ. ಯುವಜನರಿಗೆ ಅಕ್ಷರಗಳ ಆಕಾರಗಳನ್ನು ಮತ್ತು ಸಂಖ್ಯೆಗಳ ಚಮತ್ಕಾರವನ್ನು ಮಾತ್ರ ಹೇಳಿಕೊಟ್ಟು ಅಂಕಗಣಿತವನ್ನು ಕಪಟಚೇಷ್ಟೆಯನ್ನಾಗಿ ಮತ್ತು ಸಾಹಿತ್ಯವನ್ನು ಕಾಮವನ್ನಾಗಿ ಪರಿವರ್ತಿಸಲಾಗುತ್ತದೆ. ಇದಕ್ಕೆ ತದ್ವಿರುದ್ಧವಾಗಿ ಶಿಕ್ಷಣವೆಂದರೆ ಅವರಿಗೆ ದೇಹ ಹಾಗೂ ಆತ್ಮಗಳ ಪರಿಪೂರ್ಣ ಬಳಕೆ ಹಾಗೂ ನಿಗ್ರಹಗಳಲ್ಲಿ ತರಬೇತಿ ಕೊಡುವುದಾಗಿದೆ. ಅದು ಕಷ್ಟಕರವಾದ, ನಿರಂತರವಾದ ಮತ್ತು ತ್ರಾಸದಾಯಕವಾದ ಕೆಲಸ; ಅದನ್ನು ಸಹಾನುಭೂತಿಯಿಂದ, ಎಚ್ಚರ ವಹಿಸುವುದರ ಮೂಲಕ, ತಿಳಿ ಹೇಳುವುದರ ಮೂಲಕ, ಮೆಚ್ಚುಗೆ ತೋರಿಸುವ ಮೂಲಕ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ನಾವೇ ಮಾದರಿಯಾಗುವ ಮೂಲಕ ಮಾಡಬೇಕಾಗುತ್ತದೆ". ಕಳಪೆ ಗುಣಮಟ್ಟದ ಶಿಕ್ಷಣ ಪದ್ಧತಿ ಕಳಪೆತನವನ್ನು ಹೆಚ್ಚಿಸಬಲ್ಲದೇ ಹೊರತು ಶ್ರೇಷ್ಠತೆಯನ್ನು ಸೃಷ್ಟಿಸಲಾರದು.

ಉನ್ನತ ಮಟ್ಟದ ಸಂಶೋಧನೆ ಮತ್ತು ಅಭಿವೃದ್ಧಿಯ ಕೆಲಸದಲ್ಲಿ

ತೊಡಗಿಕೊಂಡಿರುವ ಆಸಕ್ತ, ಶಿಕ್ಷಕರಿಂದ ಮಾತ್ರ ಉನ್ನತ ಶಿಕ್ಷಣ ರಂಗದಲ್ಲಿ ಶ್ರೇಷ್ಠತೆಯನ್ನು ಕಾಪಾಡುವುದು ಸಾಧ್ಯ. ಇದರರ್ಥವೆಂದರೆ ಉನ್ನತ ಶಿಕ್ಷಣವು ಮೂಲತಃ ಧೀಮಂತ ವರ್ಗದ ಪಕ್ಷಪಾತಿಯಾಗಿರುತ್ತದೆ. ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಗಂಭೀರ ಲೋಪಗಳಿದ್ದರೂ ಕೂಡ ವಿಜ್ಞಾನ ಹಾಗೂ ತಂತ್ರಜ್ಞಾನದ ಕೆಲವು ಆಯ್ದ ಕ್ಷೇತ್ರಗಳಲ್ಲಿ ಆದ ಬೆಳವಣಿಗೆ ಗಮನಾರ್ಹವಾಗಿದೆ ಮಾತ್ರವಲ್ಲ ಜಾಗತಿಕ ಮಟ್ಟದ್ದಾಗಿದೆ ಎನ್ನುವುದನ್ನು ಗಮನಿಸಿದರೆ ನಮ್ಮ ಯುವ ಜನಾಂಗ ಯಾರಿಗೂ ಕಡಿಮೆಯಲ್ಲ ಮತ್ತು ನಮ್ಮ ದೇಶದ ಹಿರಿಮೆಯನ್ನು ಮತ್ತೆ ಗಳಿಸಿಕೊಡಬಲ್ಲದು ಎನ್ನುವುದು ಸ್ಪಷ್ಟವಾಗಿದೆ. ಆದರೆ ಇದು ಸಾಧ್ಯವಾಗುವುದು ನಾವು ಉತ್ಕೃಷ್ಟತೆಯನ್ನು ಬೆಂಬಲಿಸಿದರೆ, ಗುಣಮಟ್ಟದ ಮೇಲೆ ಒತ್ತು ಕೊಟ್ಟರೆ ಮತ್ತು ನಮ್ಮ ವಿಶ್ವವಿದ್ಯಾಲಯಗಳಲ್ಲಿ ಸ್ವಂತಿಕೆಯನ್ನು ಪೋಷಿಸುವ ವಾತಾವರಣವನ್ನು ನಿರ್ಮಿಸಿದರೆ ಮಾತ್ರ. ಹಾಗೆ ಆದಾಗ ಮಾತ್ರ ನಮ್ಮ ವಿಶ್ವವಿದ್ಯಾಲಯಗಳು ಅನುಕರಣೆಯ ಬದಲು ಆವಿಷ್ಕಾರ ಮಾಡುವವರನ್ನು, ಕಡತವನ್ನು ನೆಚ್ಚಿಕೊಳ್ಳುವ ನೌಕರಶಾಹಿ ಮನೋಭಾವದವರ ಬದಲು ಯೋಜನೆಗಳನ್ನು ಕಲ್ಪಿಸಬಲ್ಲವರನ್ನು, ಉದ್ಯೋಗಗಳನ್ನು ಅರಸುವ ಬದಲು ಉದ್ಯೋಗಗಳನ್ನು ಸೃಷ್ಟಿಸಬಲ್ಲವರನ್ನು, ಹಿಂಬಾಲಕರ ಬದಲಾಗಿ ಚಿಂತಕರನ್ನು ಸೃಷ್ಟಿ ಮಾಡಬಲ್ಲವು. ಹಾಗಾದಾಗ ಮಾತ್ರ ನಮ್ಮ ವಿಶ್ವವಿದ್ಯಾಲಯಗಳ ಸ್ನಾತಕರು ಫ್ರಾನ್ಸಿನ ಶ್ರೇಷ್ಠ ಚಿಂತಕನಾದ ದೇಕಾರ್ತ್‌ನ ಹೇಳಿಕೆಯನ್ನು ಆತ್ಮವಿಶ್ವಾಸದಿಂದ ಪುನರುಚ್ಚರಿಸಬಲ್ಲರು; "ನಾನು ಯೋಚಿಸುತ್ತೇನೆ ಆದ್ದರಿಂದ ನಾನು ಇದ್ದೇನೆ". ಅವರು ಮಾತ್ರ ನಮ್ಮ ಸಮಾಜವನ್ನು ಒಂದು ಜೀವಂತ ಚಲನಶೀಲ ಸಮಾಜವನ್ನಾಗಿ ಪರಿವರ್ತಿಸಬಲ್ಲರು.

ಈಗ ರೂಢಿಯಲ್ಲಿರುವಂತೆ ವಿದೇಶಗಳಿಂದ ಆಮದಾದ ತಂತ್ರಜ್ಞಾನದಿಂದ ಮಾತ್ರ ನಮ್ಮ ಕೈಗಾರಿಕೆಗಳು ಉಳಿಯಬಲ್ಲವು ಎಂದು ನಂಬಿರುವ ಸಿದ್ಧ ಸಲಕರಣೆಗಳ 'ಕಿಟ್' ಸಂಸ್ಕೃತಿಯ ಬದಲಾಗಿ ನಮ್ಮ ಶಿಕ್ಷಣ ಸಂಸ್ಥೆಗಳಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿಯ ಕೆಲಸ ನಡೆಯದಿದ್ದರೆ ನಮ್ಮ ಕೈಗಾರಿಕೆಗಳು ಚೈತನ್ಯಪೂರ್ಣವೂ, ಸ್ವಾವಲಂಬಿಗಳೂ ಮತ್ತು ಪ್ರಗತಿಪರವೂ ಆಗುವುದು ಅಸಾಧ್ಯ. ಅಶಕ್ತ ಕೈಗಾರಿಕೆಗಳ ವಿವೇಚನಾರಹಿತ ಸಂರಕ್ಷಣೆ ಮತ್ತು ಬೆಂಬಲಗಳು ವಿತ್ತದ ಕೊರತೆಯನ್ನು ಹೆಚ್ಚಿಸುತ್ತವೆ. ಅಭಿವೃದ್ಧಿಯನ್ನು ಕುಂಠಿತಗೊಳಿಸುತ್ತವೆ. ಆಮದಾದ ತಂತ್ರಜ್ಞಾನದ ಮೇಲಿನ ನಿರಂತರ ಅವಲಂಬನೆಯನ್ನು ಹೆಚ್ಚಿಸುತ್ತವೆ. ಪ್ರಯೋಗಶೀಲತೆಯ ಸತ್ವವನ್ನು ನಾಶ ಮಾಡುತ್ತವೆ ಮತ್ತು ದೇಶದ ಆರ್ಥಿಕ ವ್ಯವಸ್ಥೆಯ ಮೇಲೆ ಹೊರೆಯಾಗುತ್ತವೆ. ಗ್ಯಾಟ್ ನಂತರ ಸಂದರ್ಭದಲ್ಲಿ ಕೈಗಾರಿಕೆಗಳು, ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಗಳು ಹಾಗೂ ವಿಶ್ವವಿದ್ಯಾಲಯಗಳು ಇವುಗಳ ಮಧ್ಯೆ ಜೈವಿಕ ಸಂಬಂಧ ಮತ್ತು ಚಲನಶೀಲವಾದ

ಪಾಲುಗಾರಿಕೆಯನ್ನು ಸೃಷ್ಟಿಸದಿದ್ದಲ್ಲಿ ನಮ್ಮ ಕೈಗಾರಿಕೆಗಳು ಜಾಗತಿಕ ಅರ್ಥವ್ಯವಸ್ಥೆಯ ಮಾರುಕಟ್ಟೆಯಲ್ಲಿ ಬೆಲೆ ಮತ್ತು ಗುಣಮಟ್ಟ ಇವೆರಡರಲ್ಲೂ ಸ್ಪರ್ಧಿಸಲು ಅಸಾಧ್ಯವಾಗುತ್ತದೆ.

**ತಂತ್ರಜ್ಞಾನ : ಪ್ರಾಬಲ್ಯದ ನಾಣ್ಯ**

"ನಾವು ಈ ಜಗತ್ತನ್ನು ಆಶಾದಾಯಕವಾದ ಭವಿಷ್ಯದ ಕಡೆಗೆ ಕರೆದುಕೊಂಡು ಹೋಗಬೇಕಾದರೆ ಇಂದು ತಂತ್ರಜ್ಞಾನ ನಮ್ಮ ಗೃಹದ ವಾತಾವರಣದ ಅಂಗವಾಗಿದೆಯೆನ್ನುವುದು ಅರ್ಥಮಾಡಿಕೊಳ್ಳಬೇಕು. ಅದನ್ನು ವಾಯು ಮತ್ತು ನೀರಿನ ಹಾಗೆ ಮನುಷ್ಯಕುಲದ ಇತರರ ಜತೆಗೆ ಹಂಚಿಕೊಳ್ಳಬೇಕು" ಎನ್ನುವ ತಾತ್ವಿಕ ಹೇಳಿಕೆಗಳನ್ನು ಎಲ್ಲಾ ಬಗೆಯ ಅಂತರ್ ರಾಷ್ಟ್ರೀಯ ವೇದಿಕೆಗಳಲ್ಲಿ ಘೋಷಿಸಲಾಗುತ್ತದೆ. ಆದರೆ ವಾಸ್ತವವಾಗಿ ನಾವು ನೋಡುತ್ತಿರುವುದೆಂದರೆ ಹಳೆಯ ವಸಾಹತುಶಾಹಿಯ ಅನುಷ್ಠಾನವನ್ನು. ಮುಂದುವರಿದ ರಾಷ್ಟ್ರಗಳು ತಂತ್ರಜ್ಞಾನದ ನಿಯಂತ್ರಣವನ್ನು ಹೇರುವ ಚಾಣಾಕ್ಷತನದ, ವಿವೇಚನಾಶೂನ್ಯ ಮತ್ತು ಕ್ರೂರವಾದ ಯಜಮಾನಿಕೆಯ ತಾಂತ್ರಿಕ ವಸಾಹತುಶಾಹಿ ಇದಾಗಿದೆ. ಹಿಂದುಳಿದ ದೇಶಗಳ ಮೇಲಿನ ಸತತವಾದ ಶೋಷಣೆ ಹಾಗೂ ದಬ್ಬಾಳಿಕೆಯ ಅಸ್ತ್ರವಾಗಿ ವಿಜ್ಞಾನ ಹಾಗೂ ತಂತ್ರಜ್ಞಾನಗಳು ಬಳಕೆಯಾಗುತ್ತಿವೆ. ಈ ಅರ್ಥದಲ್ಲಿ ಅವು ಚಲಾವಣೆಯಲ್ಲಿರುವ ಪ್ರಭುತ್ವದ ಮಾಧ್ಯಮಗಳಾಗಿವೆ. ವಿಜ್ಞಾನ ಹಾಗೂ ತಂತ್ರಜ್ಞಾನಗಳು ಹೊಸ ಸಂಪತ್ತಿನ ಸೃಷ್ಟಿಯ ಸಾಧನಗಳಾಗಿವೆ. ಆದರೆ ನಾವು ಪಡೆಯುವ ಪ್ರತಿಯೊಂದು ಯಶಸ್ಸಿನ ಜತೆಗೆ ಹೊರಗಡೆಯಿಂದ ತಾಂತ್ರಿಕ ಜ್ಞಾನವನ್ನು ಪಡೆಯುವುದು ಹೆಚ್ಚು ಕಷ್ಟಕರವಾಗುತ್ತದೆ; ಅಲ್ಲದೆ ನಾವು ಅಂತರ್ ರಾಷ್ಟ್ರೀಯ ಮಾರುಕಟ್ಟೆಯ ಅಡಚಣೆಗಳಿಗೆ ಹಾಗೂ ಒತ್ತಡಗಳಿಗೆ ಹೆಚ್ಚು ಹೆಚ್ಚಾಗಿ ಒಳಗಾಗುತ್ತೇವೆ-ಎನ್ನುವುದನ್ನು ನಾವು ಅರ್ಥಮಾಡಿ ಕೊಳ್ಳಬೇಕು. ಸಂಪೂರ್ಣ ಸ್ವಾವಲಂಬನೆಯ ನೆಲೆಯನ್ನು ಒದಗಿಸಬಲ್ಲ ವಿಜ್ಞಾನ ಹಾಗೂ ತಂತ್ರಜ್ಞಾನದ ಪ್ರಗತಿಯನ್ನು ಅಲಕ್ಷ್ಯ ಮಾಡುವ ಇಂದಿನ ಯಾವುದೇ ದೇಶವು ಆಧುನಿಕ ಜಗತ್ತಿನಲ್ಲಿ ನಾಶವಾಗಿಬಿಡುತ್ತದೆ. ಭವಿಷ್ಯದ ಭಾರತದ ಕಾಣ್ಕೆಯನ್ನು ವಿಜ್ಞಾನ ಹಾಗೂ ತಂತ್ರಜ್ಞಾನದ ಶ್ರೇಷ್ಠತೆಯ ಆಧಾರದ ಮೇಲೆ ಕಟ್ಟಿದಾಗ ಮಾತ್ರ ಈ ದೇಶ ಪ್ರಗತಿಯನ್ನು ಸಾಧಿಸಬಲ್ಲದು.

# ಕರ್ನಾಟಕದ ಆರ್ಥಿಕತೆ ಭವಿಷ್ಯ

ಇಂಗ್ಲೀಶ್ ಮೂಲ: ಡಾ. ಪಿ. ಆರ್. ಬ್ರಹ್ಮಾನಂದ
ಕನ್ನಡ ಅನುವಾದ : ಟಿ. ಆರ್. ಚಂದ್ರಶೇಖರ

ಹಂಪಿಗೆ ಬಂದು ಕರ್ನಾಟಕದ ಆರ್ಥಿಕತೆ ಭವಿಷ್ಯ ಕುರಿತು ಪ್ರಬಂಧವೊಂದನ್ನು ಮಂಡಿಸುವಂತೆ ಮಾಡಿದ ಪ್ರಸಿದ್ಧ ಸಾಹಿತಿಗಳೂ ಹಾಗೂ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳೂ ಆಗಿರುವ ಡಾ.ಚಂದ್ರಶೇಖರ ಕಂಬಾರ ಅವರಿಗೆ ಕೃತಜ್ಞತೆ ಸಲ್ಲಿಸುವುದು ನನ್ನ ಕರ್ತವ್ಯ. ಇಲ್ಲಿ ಚರ್ಚೆಯು ಕರ್ನಾಟಕದ ಆರ್ಥಿಕತೆಯ ಭವಿಷ್ಯವನ್ನು ಕುರಿತದ್ದಾಗಿದೆ. ಭವಿಷ್ಯ ಕುರಿತ ಚರ್ಚೆಯಲ್ಲಿ ಆರ್ಥಿಕ ಭವಿಷ್ಯವು ತುಂಬಾ ಮುಖ್ಯವಾದುದು. ವಾಸ್ತವವಾಗಿ ಆರ್ಥಿಕ ಭವಿಷ್ಯವೇ ಒಟ್ಟು ಭವಿಷ್ಯವನ್ನು ನಿರ್ಧರಿಸುವ ಅಂಶವಾಗಿದೆ.

ಸುಮಾರು ನಾಲ್ಕೈದು ವರ್ಷಗಳ ಹಿಂದೆ ಟೈಮ್ಸ್ ಆಫ್ ಇಂಡಿಯಾದ ಸಂಪಾದಕ ದಿವಂಗತ ಕುಸುಮಾಕರ್ ರವರ ಆಹ್ವಾನದ ಮೇರೆಗೆ ನಾನು ಕರ್ನಾಟಕದ ಆರ್ಥಿಕತೆ ಅಂದರೆ ಕರ್ನಾಟಕ ಪ್ರದೇಶ ಆರ್ಥಿಕತೆಯಲ್ಲಿನ ಪ್ರಧಾನ ಪ್ರವೃತ್ತಿಗಳ ಅವಲೋಕನದಲ್ಲಿ ತೊಡಗಿದೆ. ಈ ಅಧ್ಯಯನದಲ್ಲಿ ನನಗೆ ಕಂಡುಬಂದ ಅಂಶವೇನೆಂದರೆ ೭೦ ರ ದಶಕದ ಮಧ್ಯಭಾಗದಿಂದ ೮೦ರ ದಶಕದ ಕೊನೆಯವರೆಗೆ ಕರ್ನಾಟಕದ ಕೃಷಿಯಲ್ಲಿ ಉತ್ಪನ್ನದ ಬೆಳವಣಿಗೆ ದರವು ಸಂಪೂರ್ಣವಾಗಿ ಸ್ಥಗಿತಗೊಂಡಿತ್ತು. ಇದೊಂದು ಆಶ್ಚರ್ಯಕರ ಸಂಗತಿಯಾಗಿ ಕಂಡು ಬಂದಿತು. ಏಕೆಂದರೆ ಇದೇ ಕಾಲಾವಧಿಯಲ್ಲಿ ಎಕರೆವಾರು ರಸಗೊಬ್ಬರದ ಬಳಕೆ ಅತ್ಯುನ್ನತ ಮಟ್ಟದಲ್ಲಿತ್ತು. ನೀರಾವರಿಗೆ ಒಳಪಡಿಸಿದ ಪ್ರದೇಶದ ವಿಸ್ತೀರ್ಣವು ಮಂದಗತಿಯಲ್ಲಾದರೂ ಸರಿ. ವಿಸ್ತರಿಸುತ್ತಿತ್ತು. ಕೃಷಿ ಬೆಳೆಗಳ ದರಗಳೂ ಸಹ ಸಾಪೇಕ್ಷವಾಗಿ ಮತ್ತು ನಿರಪೇಕ್ಷವಾಗಿ ಹೆಚ್ಚುತ್ತಿದ್ದವು. ನೀರೆತ್ತುವ ಪಂಪುಗಳ ಸಂಖ್ಯೆಯು ಗಣನೀಯ ದರದಲ್ಲಿ ಹೆಚ್ಚುತ್ತಿದ್ದವು. ಗ್ರಾಮೀಣ ವಿದ್ಯುತೀಕರಣ ಕ್ಷೇತ್ರದಲ್ಲಿ ಅಮೋಘ ಸಾಧನೆಗೈದ ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿ ವಿದ್ಯುತ್‌ನ ಬಳಕೆಯು ಅಧಿಕಗೊಳ್ಳುತ್ತಿತ್ತು. ಬೆಳೆಗಳಲ್ಲಿ ಅಧಿಕ ಇಳುವರಿ ನೀಡುವ ತಳಿಗಳ ಪ್ರಮಾಣವು ಹೆಚ್ಚುತ್ತಿತ್ತು. ಗ್ರಾಮೀಣಾಭಿವೃದ್ಧಿ ಚಟುವಟಿಕೆಗಳ ಮೇಲೆ ಸರ್ಕಾರದ ವೆಚ್ಚವೂ ಸಹ ಸ್ಥಿರ ಬೆಲೆ ಹಾಗೂ ಚಾಲ್ತಿ ಬೆಲೆಗಳಲ್ಲಿ ಹೆಚ್ಚುತ್ತಿದ್ದುದೂ ನಿಜ. ಹಾಗಾದರೆ ಉತ್ಪನ್ನ ಯಾಕೆ ಹೆಚ್ಚುತ್ತಿರಲಿಲ್ಲ? ಉಳುಮೆ ಮಾಡಿದ ಪ್ರದೇಶವು ಸ್ಥೂಲವಾಗಿ

ಸ್ಥಿರವಾಗಿತ್ತು. ಇಳುವರಿ ದರವೂ ಕೂಡ ಸ್ಥಿರವಾಗಿತ್ತು.

ಬಹುಶಃ ನನ್ನ ಊಹೆಯಂತೆ ಇದಕ್ಕೆ ಹಲವಾರು ಕಾರಣಗಳಿರಲು ಸಾಧ್ಯ. ದೇಶದಲ್ಲಿ ಹಸಿರು ಕ್ರಾಂತಿ ಸಂಭವಿಸುತ್ತಿರುವಾಗ ಕರ್ನಾಟಕದ ಕೃಷಿ ಬೆಳವಣಿಗೆ ಸ್ಥಗಿತಗೊಂಡಿತ್ತು.

೧. ವಿವಿಧ ಬೆಳೆಗಳ ಸಾಪೇಕ್ಷ ಪರಿಮಾಣದಲ್ಲಿ ಗಣನೀಯ ಬದಲಾವಣೆಗಳು ಸಂಭವಿಸಿರಬಹುದು.

೨. ಭೂಮಿಯ ಫಲವತ್ತತೆಯು ಕ್ಷೀಣಿಸುತ್ತಿದೆ. ಭೂಮಿಯ ಮೇಲೆ ಹಾಕದ ಗೊಬ್ಬರ - ರಸಗೊಬ್ಬರ ಮುಂತಾದವು ಫಲವತ್ತತೆಯನ್ನು ಕಾಯ್ದುಕೊಂಡವೇ ವಿನಾ ಫಲವತ್ತತೆಯನ್ನು ಉತ್ತಮಪಡಿಸಲಿಲ್ಲ.

೩. ಜಲಸಂಪತ್ತಿನ ಲಭ್ಯತೆಯು ಹೆಚ್ಚಾಗಿ ಉತ್ಪನ್ನ ಸ್ಥಿರೀಕರಣ ಸ್ವರೂಪದ್ದಾಗಿತ್ತೆ ಹೊರತು ಉತ್ಪನ್ನವನ್ನು ಅಧಿಕಗೊಳಿಸುವ ಸ್ವರೂಪದ್ದಾಗಿರಲಿಲ್ಲ.

೪. ೭೦ರ ದಶಕದ ಮಧ್ಯಭಾಗದಿಂದ ೮೦ ರ ದಶಕದ ಕೊನೆ ಭಾಗದವರೆಗಿನ ಕಾಲಾವಧಿಯಲ್ಲಿ, ಹಿಂದಿನ ದಶಕಗಳಿಗಿಂತ ಹೆಚ್ಚಿನ ಭಾರಿ ಬರಗಾಲವು ಆರ್ಥಿಕತೆಯನ್ನು ಕಾಡಿದೆ.

೫. ಕೃಷಿ ಚಟುವಟಿಕೆಯಿಂದ ಕೃಷಿಯೇತರ ಚಟುವಟಿಕೆಗಳಿಗೆ ಶ್ರಮದ ವರ್ಗಾವಣೆ ಸಂಭವಿಸಿದ್ದಿರಬಹುದು ಮತ್ತು ಇದರಿಂದಾಗಿ ಶ್ರಮದ ಕೊರತೆ ತಲೆದೋರಿರಬಹುದು.

೬. ರೈತರ ಸ್ವಂತ ಬಂಡವಾಳ ಸ್ವತ್ತಾದ ಸಾಕುಪ್ರಾಣಿಗಳು ಮತ್ತು ಸಾಮಾಜಿಕ ಸೌಲಭ್ಯಗಳಾದ ಕೆರೆ. ಭಾವಿ ಮುಂತಾದವುಗಳ ನಿರ್ವಹಣೆಯು ಸಮರ್ಪಕವಾಗಿರಲಿಕ್ಕಿಲ್ಲ.

೭. ಉತ್ಪಾದನಾ ಸಲಕರಣೆಗಳ ವಿತರಣೆಯಲ್ಲಿ, ಸರ್ಕಾರವು ರೈತರಿಗೆ ಒದಗಿಸುವ ಉಪಕರಣಗಳ ಸಂಚಿಯಲ್ಲಿ ಹಾಗೂ ರೈತರ ಅಭಿವೃದ್ಧಿಗಾಗಿ ಸರ್ಕಾರವು ಮಾಡುವ ವೆಚ್ಚದಲ್ಲಿ ದುರುಪಯೋಗ ಉಂಟಾಗಿರಬಹುದು.

೮. ಫಲವತ್ತಾದ ಕೃಷಿ ಭೂಮಿಯು ಕೃಷಿಯೇತರ ಉದ್ದೇಶಗಳಿಗೆ ಹೆಚ್ಚು ಹೆಚ್ಚು ವರ್ಗಾವಣೆಯಾಗಿರಬಹುದು.

೯. ಈ ಬಗ್ಗೆ ದೊರೆಯುವ ಅಂಕಿ-ಅಂಶಗಳು ತಪ್ಪು ಮಾಹಿತಿಯಿಂದ ಕೂಡಿವೆ. ಅವು ವಾಸ್ತವಿಕ ಬೆಳವಣಿಗೆ ಚಿತ್ರಣವನ್ನು ನೀಡುವುದಿಲ್ಲ.

ಮೇಲ್ಕಂಡ ಪ್ರಮೇಯಗಳನ್ನೆಲ್ಲಾ ಪರೀಕ್ಷಿಸಿ. ಅವುಗಳಲ್ಲಿ ಯಾವುದು ಪ್ರಧಾನ

ಹಾಗೂ ಯಾವುದು ಅಪ್ರಧಾನ ಎಂಬುದನ್ನು ನಿರ್ಧರಿಸಲು ನನ್ನ ಬಳಿ ಸಾಕಷ್ಟು ಮಾಹಿತಿ ಇರಲಿಲ್ಲ ಮತ್ತು ಈಗಲೂ ಇಲ್ಲ. ಆದರೆ ಒಂದು ಮಾತ್ರ ಅತ್ಯಂತ ಸ್ಪಷ್ಟವಾಗಿದೆ. ಕರ್ನಾಟಕದ ಕೃಷಿಯು ಸುದೀರ್ಘಕಾಲ ಸ್ಥಗಿತತೆಯನ್ನು ಅನುಭವಿಸಿರುವುದು ನಿರ್ವಿವಾದವಾಗಿದೆ. ಈ ಅಧ್ಯಯನದಲ್ಲಿ ಗೋಚರಿಸಿದ ಮತ್ತೊಂದು ಅಂಶವೆಂದರೆ ಉದ್ದಿಮೆ ಕ್ಷೇತ್ರದಲ್ಲೂ ಸಹ ಏರುಮುಖ ಬೆಳವಣಿಗೆಯೇನೂ ಕಂಡುಬರುತ್ತಿಲ್ಲ. ಪ್ರಾರಂಭದ ಕಾಲಾವಧಿಯಲ್ಲಿ ಅಗ್ರಗಣ್ಯ ಸ್ಥಾನದಲ್ಲಿದ್ದ ಕರ್ನಾಟಕದ ಹಣಕಾಸು ಕ್ಷೇತ್ರದಲ್ಲೂ ಸಹ ಪರಿಸ್ಥಿತಿ ಸಮಾಧಾನಕರವಾಗಿಲ್ಲ.

ಸಹಜವಾಗಿ ಕರ್ನಾಟಕದ ಆರ್ಥಿಕ ಭವಿಷ್ಯದ ಬಗ್ಗೆ ನನಗೆ ಕಳವಳ ಉಂಟಾಯಿತು. ಬಡತನ ರೇಖೆಯ ಕೆಳಗೆ ಬದುಕುತ್ತಿರುವ ಬಡವರ ಸಂಖ್ಯೆಯಲ್ಲೂ ಗಣನೀಯ ಇಳಿತ ಸಂಭವಿಸಿರುವ ಸೂಚನೆಗಳೇನೂ ಇಲ್ಲ. ಇದಕ್ಕೆ ಪ್ರತಿಯಾಗಿ ಜನಸಂಖ್ಯೆಯ ಬೆಳವಣಿಗೆ ದರ ಹಾಗೂ ನಗರವಾಸಿ ಜನಸಂಖ್ಯೆಯ ಬೆಳವಣಿಗೆ ದರಗಳು ಮಾತ್ರ ಏರುಮುಖಿಯಾಗೆ ಇವೆ. ಕರ್ನಾಟಕದ ಕುಟುಂಬ ಯೋಜನಾ ಕ್ಷೇತ್ರದಲ್ಲಿನ ಸಾಧನೆಯು ಯಾವುದೇ ಆಶಾಭಾವನೆ ಮೂಡಿಸುವ ಸ್ಥಿತಿಯಲ್ಲೇನೂ ಇಲ್ಲ. ಸಾಮಾಜಿಕ ಸೂಚ್ಯಂಕಗಳಾದ ಶಿಶು ಮರಣದರ, ಮಹಿಳಾ ಸಾಕ್ಷರತೆ, ಪೂರ್ವ ಪ್ರಾಥಮಿಕ ಹಂತದಲ್ಲಿ ನಿರ್ಗಮನದ ಸಂಖ್ಯೆ (Drop-out) ಮುಂತಾದವುಗಳಲ್ಲಿ ಕರ್ನಾಟಕದ ಸಾಧನೆ ಅದ್ವಿತೀಯವಾದುದೇನಲ್ಲ.

ನಾನು ಗಮನಿಸಿರುವಂತೆ ಕರ್ನಾಟಕದಲ್ಲಿ ರಾಜ್ಯಮಟ್ಟದ ಆರ್ಥಿಕ ಸಮಸ್ಯೆಗಳು ಸಾರ್ವಜನಿಕರ ಗಮನವನ್ನು ಎಷ್ಟು ಸೆಳೆಯಬೇಕೋ ಅಷ್ಟು ಸೆಳೆಯುತ್ತಿಲ್ಲ. ನಿಜ, ಕರ್ನಾಟಕಕ್ಕೆ ಯೋಜನೆಯನ್ನು ನಿರ್ವಹಿಸುವುದರಲ್ಲಿ, ಆರ್ಥಿಕ ವರದಿ ತಯಾರಿಸುವುದರಲ್ಲಿ ಹಾಗೂ ಸರ್ವೇಕ್ಷಣಗಳನ್ನು ನಡೆಸುವುದರಲ್ಲಿ ಸುದೀರ್ಘ ಅನುಭವವಿದೆ. ಅದು ದಕ್ಷ ಆಡಳಿತಗಾರರನ್ನು ಪಡೆದಿದೆ. ಆರ್ಥಿಕ ವಿಷಯಗಳಿಗೆ ಸಂಬಂಧಿಸಿದಂತೆ ಸಲಹೆ - ನೀತಿ ನಿರೂಪಣೆಗಳಲ್ಲಿ ಸರ್ಕಾರದ ಜೊತೆ ಸಹಕರಿಸುವ ಖ್ಯಾತ ಆರ್ಥಿಕ ತಜ್ಞರಿದ್ದಾರೆ. ಹಾಗಾದರೆ ೫೦ ಮತ್ತು ೬೦ ರ ದಶಕಗಳ ಕಾಲಾವಧಿಯಲ್ಲಿ ಬೆಳೆದ ದರದಲ್ಲಿ ೭೦ ರ ದಶಕದ ಮಧ್ಯಭಾಗದಿಂದ ೮೦ರ ದಶಕದ ಅಂತ್ಯದವರೆಗಿನ ಕಾಲಾವಧಿಯಲ್ಲಿ ಕರ್ನಾಟಕದ ಆರ್ಥಿಕತೆ ಯಾಕೆ ಬೆಳೆಯುತ್ತಿಲ್ಲ ಎಂಬುದು ನನಗೆ ಒಗಟಾಗಿ ಪರಿಣಮಿಸಿದೆ. ಒಂದು ವೇಳೆ ಈ ಆರ್ಥಿಕ ಸ್ಥಗಿತತೆಯು ಹೀಗೆ ಮುಂದುವರಿದರೆ ಕಾಲಕ್ರಮೇಣ ಕರ್ನಾಟಕದ ಆರ್ಥಿಕತೆಯು ಬಿಹಾರದ ಆರ್ಥಿಕತೆಯಂಥಾಗಿಬಿಡಬಹುದು ಎಂಬ ಭವಿಷ್ಯ ನುಡಿಯುವ ಮನಸ್ಸಾಗುತ್ತಿದೆ. ರಾಷ್ಟ್ರ ಮಟ್ಟದಲ್ಲಿ ಸರಾಸರಿಗಿಂತ ಉನ್ನತ ಸ್ಥಾನದಲ್ಲಿದ್ದ ಕರ್ನಾಟಕವು ಸಾವಕಾಶವಾಗಿ ಸರಾಸರಿಯ ಸ್ಥಾನಕ್ಕೆ ಜರುಗುತ್ತಿದೆ.

ಅಂದು 'ಟೈಮ್ಸ್' ಪತ್ರಿಕೆಯ ಸಂಪಾದಕರ ಕೃಪೆಯಿಂದಾಗಿ ನಾನು ಈ ಕುರಿತು ಹಲವಾರು ಅಧ್ಯಯನ ಪ್ರಬಂಧಗಳನ್ನು ಪ್ರಕಟಿಸಿದ್ದು ನನ್ನ ನೆನಪಿನಲ್ಲಿದೆ. ಆದರೆ ನನ್ನ ದುರದೃಷ್ಟಕ್ಕೆ ಅವಕ್ಕೆ ಸರಿಯಾದ ಪ್ರತಿಕ್ರಿಯೆ ಹೊರಗಿನಿಂದ ಬರಲಿಲ್ಲ. ಒಲ್ಲದ ಮನಸ್ಸಿನಿಂದ ಅಂದಿನ ನನ್ನ ಅನ್ವೇಷಣೆಯನ್ನು ನಿಲ್ಲಿಸಬೇಕಾಯಿತು. ಬಹುಶಃ ಸರ್ಕಾರದ ಒಳಗೆ ಇದ್ದ ಮತ್ತು ಸರ್ಕಾರಕ್ಕೆ ಆಪ್ತರೂ ಆಗಿದ್ದ ಕೆಲವರಿಗೆ ನನ್ನ ಅಧ್ಯಯನಗಳಿಂದ ಅಸಮಧಾನವಾಗಿದ್ದಿರಬೇಕು.

೯೦ರ ದಶಕದಲ್ಲಿ ಪರಿಸ್ಥಿತಿ ಹೇಗಿದೆ? ೭೦ರ ದಶಕದ ಮಧ್ಯಭಾಗದಿಂದ ೮೦ರ ದಶಕದ ಅಂತ್ಯದವರೆಗಿನ ಕಾಲಾವಧಿಗೆ ಮುನ್ನಿನ ಕಾಲಾವಧಿಯಲ್ಲಿದ್ದ ಸಮೃದ್ಧತೆಗೆ ಮರಳುವಷ್ಟು ಭರವಸೆ ಮೂಡಿಸುವ ಪ್ರಮಾಣದಲ್ಲಿಲ್ಲದಿದ್ದರೂ ಸಹ ಲಭ್ಯವಿರುವ ೧೯೯೨-೯೩ ಕ್ಕೆ ಸಂಬಂಧಿಸಿದ ಕೆಲವು ಹಾಗೂ ೧೯೯೩-೯೪ರ ಸಾಲಿಗೆ ಸಂಬಂಧಿಸಿದ ಕೆಲವು ಮಾಹಿತಿಗಳು ಅಲ್ಪ ಪ್ರಮಾಣದ ಪುನಶ್ಚೇತನದ ಸೂಚನೆಯನ್ನು ತೋರಿಸುತ್ತಿವೆ. ೭೦ರ ದಶಕದ ಮಧ್ಯಭಾಗದಲ್ಲಿ ಸಾಧಿಸಿದ್ದ ಆಹಾರ ಉತ್ಪನ್ನದ ಗರಿಷ್ಠ ಮಟ್ಟವನ್ನು ಇದುವರೆಗೂ ಮೀರಲೂ ಸಾಧ್ಯವಾಗದಿದ್ದ ಕರ್ನಾಟಕದ ಆಹಾರ ಉತ್ಪನ್ನವು ೧೯೯೦-೯೪ರ ಅವಧಿಯಲ್ಲಿ ವಾರ್ಷಿಕ ಸರಾಸರಿ ೭೩-೭೪ ಲಕ್ಷ ಟನ್ ಉತ್ಪಾದಿಸಿ ಹಿಂದಿನ ಗರಿಷ್ಠ ಮಟ್ಟಕ್ಕಿಂತ ಹೆಚ್ಚಿನ ಮಟ್ಟವನ್ನು ಸಾಧಿಸಿದೆ. ೧೯೭೫-೭೬ ರಲ್ಲಿ ಕರ್ನಾಟಕದ ಆಹಾರ ಉತ್ಪನ್ನ ೬೩ ಲಕ್ಷ ಟನ್ ಇತ್ತು. ಮತ್ತು ೧೯೮೬ ರಲ್ಲಿ ಅದು ೬೮.೫ ಲಕ್ಷ ಟನ್ ಇತ್ತು. ಇದೇನು ದೊಡ್ಡ ಸಾಧನೆಯಲ್ಲ.

ಆದರೆ ಸಾಪೇಕ್ಷವಾಗಿ ಸಮಾಧಾನ ತರಬಹುದಾದ ಸಂಗತಿ ಇದಾಗಿದೆ. ಬಹುಶಃ ೧೯೯೧-೯೪ರ ಅವಧಿಯಲ್ಲಿ ಕರ್ನಾಟಕದ ಕೃಷಿಯಲ್ಲಿನ ಇಳುವರಿ ಮಟ್ಟವು ೮೦ರ ದಶಕದ ಮಟ್ಟಕ್ಕಿಂತ ಶೇ ೬ ರಿಂದ ೮ ರಷ್ಟು ಅಧಿಕವಿರಬೇಕಿತ್ತು. ಆದರೆ ೧೯೭೯-೮೦ ರ ಸಾಲಿಗೆ ಹೋಲಿಸಿದರೆ ಇಳುವರಿ ಮಟ್ಟವು ಉತ್ತಮಗೊಂಡಿಲ್ಲ. ಈಗಾಗಲೇ ಸ್ಪಷ್ಟವಾಗಿ ತಿಳಿದು ಬಂದಿರುವಂತೆ ಅಖಿಲ ಭಾರತ ಮಟ್ಟದಲ್ಲಾಗಲಿ ಅಥವಾ ಕರ್ನಾಟಕ ರಾಜ್ಯದ ಮಟ್ಟದಲ್ಲಾಗಲಿ ಉಳುಮೆ ಪ್ರದೇಶವನ್ನು ವಿಸ್ತರಿಸುವುದಕ್ಕೆ ಹೆಚ್ಚು ಅವಕಾಶವಿಲ್ಲ. ಆದ್ದರಿಂದ ಉತ್ಪನ್ನದಲ್ಲಿ ಏರಿಕೆಯು ಮೂಲಭೂತವಾಗಿ ಇಳುವರಿಯ ಏರಿಕೆಯಿಂದಲೇ ಉಂಟಾಗಬೇಕು. ಸೋವಿ ಬೆಲೆಯ ಬೆಳೆಗಳಿಂದ ದುಬಾರಿ ಬೆಲೆಯ ಬೆಳೆಗಳಿಗೆ ಉಂಟಾಗುವ ಪಲ್ಲಟದಿಂದ ಆಹಾರ ಉತ್ಪನ್ನದಿಂದ ಆಹಾರೇತರ ಉತ್ಪನ್ನಕ್ಕೆ ಎಡೆಮಾಡಿಕೊಡುತ್ತದೆ. ಜಾಗತಿಕ ದೃಷ್ಟಿಯಿಂದ ಇಂತಹ ಪ್ರವೃತ್ತಿಯು ಬಡತನವನ್ನು ತಗ್ಗಿಸುವ ಕಾರ್ಯಕ್ರಮದ ಮೇಲೆ ಹಾಗೂ ಉದ್ಯೋಗ ನಿರ್ಮಾಣದ ಮೇಲೆ

ದುಷ್ಪರಿಣಾಮ ಉಂಟುಮಾಡಬಹುದು. ೭೦ರ ದಶಕದ ಮಧ್ಯ ಭಾಗದವರೆಗಿನ ಆಹಾರ ಉತ್ಪನ್ನದಲ್ಲಿದ್ದ ಅಧಿಕ್ಯ ಸ್ಥಿತಿಗೆ ಬದಲಾಗಿ ಇಂದು ಕರ್ನಾಟಕವು ಹೆಚ್ಚು ಹೆಚ್ಚು ಆಹಾರ ಆಮದು ರಾಜ್ಯವಾಗಿ ಪರಿಣಮಿಸುತ್ತಿದೆ. ಈ ಪ್ರವೃತ್ತಿ ಮುಂದುವರೆದರೆ ಮಾರುಕಟ್ಟೆಯಿಂದ ಆಹಾರಧಾನ್ಯವನ್ನು ಖರೀದಿಸುವ ಸರ್ಕಾರದ ಸಾಮರ್ಥ್ಯಕ್ಕೆ ಕುತ್ತುಂಟಾಗುತ್ತದೆ. ಕರ್ನಾಟಕವು ಹೆಚ್ಚು ಹೆಚ್ಚು ಕೇಂದ್ರ ನಿಧಿಯಿಂದ ಬರುವ ವರ್ಗಾವಣೆ ಮೇಲೆ ಹೆಚ್ಚು ಅವಲಂಬಿಸಬೇಕಾಗುತ್ತದೆ. ಆದರೆ ಇಲ್ಲಿ ಹಲವು ಪಾಲುದಾರರೊಂದಿಗೆ ಸ್ಪರ್ಧಿಸಬೇಕಾಗುತ್ತದೆ. ರೈತಾಪಿವರ್ಗದ ಕೊಳ್ಳುವ ಶಕ್ತಿ ಉತ್ತಮಗೊಳ್ಳದಿದ್ದರೆ. ಬೆಳೆಗಳ ಉತ್ಪನ್ನ ಶಕ್ತಿಯ ಏರಿಕೆಯಲ್ಲಿ ಪ್ರತಿಫಲಿತಗೊಳ್ಳುವ ನೈಜಗೊಳ್ಳುವ ಶಕ್ತಿ ಉತ್ತಮಗೊಳ್ಳದಿದ್ದರೆ ಅವರಿಗೆ ಆಹಾರ ಪದಾರ್ಥವನ್ನು ಮಾರುಕಟ್ಟೆಯಲ್ಲಿ ಕೊಳ್ಳಲು ಸಾಮರ್ಥ್ಯವೇ ಇಲ್ಲದಂತಾಗುತ್ತದೆ.

ಈ ಬಿಕ್ಕಟ್ಟಿನಿಂದ ಬಿಡುಗಡೆಗೆ ಸೂಚಿತಗೊಂಡ ಒಂದು ಪರಿಹಾರವೆಂದರೆ ಕೃಷಿ ಕ್ಷೇತ್ರವನ್ನು ಕೈಗಾರಿಕಾ ಕ್ಷೇತ್ರಕ್ಕೆ ಸಮನಾಗಿ ಕಾಣಬೇಕು ಮತ್ತು ಭೂಮಿತಿ ಶಾಸನ. ಭೂಮಿವರ್ಗಾವಣೆ ಕಾನೂನು ಇತ್ಯಾದಿಗಳನ್ನು ಸಡಿಲಗೊಳಿಸಿ ಕೃಷಿ ಕ್ಷೇತ್ರಕ್ಕೆ ಬಂಡವಾಳ ಹರಿಯುವಂತೆ ಮಾಡುವುದು. ಈ ದಿಶೆಯಲ್ಲಿ ಕೃಷಿಯಲ್ಲಿ ಅತ್ಯಂತ ಮುಂದುವರಿದ ರಾಜ್ಯಗಳ ಅನುಭವವೇನೆಂದರೆ ಇಂತಹ ಶ್ರಮವು ಸರಾಸರಿ ಹಿಡುವಳಿ ಗಾತ್ರವನ್ನು ಹೆಚ್ಚಿಸಿ. ಯಾಂತ್ರೀಕರಣವನ್ನು ಹೆಚ್ಚು ಮಾಡಿ ಶ್ರಮದ ಅವಲಂಬನೆಯನ್ನು ತಗ್ಗಿಸುತ್ತದೆ. ಇದು ಸಹಜವಾಗಿ ದೊಡ್ಡ ಪ್ರಮಾಣದಲ್ಲಿ ಕೃಷಿ ವಲಯದಿಂದ ಶ್ರಮಿಕರನ್ನು ಉಚ್ಚಾಟಿಸುತ್ತದೆ. ನಗರ ನಿರುದ್ಯೋಗ ಸಮಸ್ಯೆಯು ಉಲ್ಬಣಗೊಳ್ಳುತ್ತದೆ. ಇದಕ್ಕೆ ಸಂಬಂಧಿಸಿದ ಆರ್ಥಿಕ ತತ್ವಗಳು ತೋರಿಸುವುದೇನೆಂದರೆ ಇಂತಹ ಕ್ರಮಗಳಿಂದ ಗಣನೀಯವಾಗಿ ಆಹಾರ ಉತ್ಪನ್ನವೇನೂ ಅಧಿಕಗೊಳ್ಳುವುದಿಲ್ಲ, ಆದರೆ ಶ್ರಮಿಕರನ್ನು ಭರಿಸುವ ಕೃಷಿಯ ಸಾಮರ್ಥ್ಯವನ್ನು ಇವು ಕುಗ್ಗಿಸಿಬಿಡುತ್ತವೆ. ಇದಕ್ಕೆ ಸಂಬಂಧಿಸಿದಂತೆ ಸರ್ಕಾರಕ್ಕೆ ಸಲಹೆ ನೀಡುವುದು ನನ್ನ ಕೆಲಸವಲ್ಲ. ಇಂತಹ ಕ್ರಮಗಳು ಗ್ರಾಮೀಣ ಪ್ರದೇಶದಿಂದ ದೊಡ್ಡ ಪ್ರಮಾಣದಲ್ಲಿ ದುಡಿಮೆಗಾರರನ್ನು ಹೊರಗೆಸೆಯುತ್ತವೆ ಎಂಬ ಅಂಶ ನನ್ನಲ್ಲಿ ಗಾಬರಿ ಹುಟ್ಟಿಸಿಬಿಡುತ್ತದೆ. ಇಂತಹ ಕ್ರಮಗಳು ಬಂಡವಾಳಶಾಹಿ ಜಮೀನ್ದಾರರಿಗೆ ತುಂಬಾ ಲಾಭ ಒದಗಿಸುತ್ತವೆ. ಆದರೆ ಇವು ಜನರ ಬದುಕನ್ನು ಉತ್ತಮ ಪಡಿಸುತ್ತವೆ ಎಂಬುದರ ಬಗ್ಗೆ ಮಾತ್ರ ಅಸ್ಪಷ್ಟತೆ ಹಾಗೇ ಉಳಿದುಬಿಡುತ್ತದೆ.

ಆದ್ದರಿಂದ ಕೃಷಿ ಕ್ಷೇತ್ರದಲ್ಲಿನ ಸ್ಥಗಿತತೆ ಹಾಗೂ ಇಂತಹ ಸ್ಥಗಿತತೆಯಿಂದ ಆರ್ಥಿಕತೆಯನ್ನು ಬಿಡುಗಡೆಗೊಳಿಸುವ ಯಾವ ಕ್ರಮಗಳೂ ಯಶಸ್ವಿಯಾಗಲಿಲ್ಲ ಯಾಕೆ ಎಂಬುದನ್ನು ಕುರಿತು ವೈಜ್ಞಾನಿಕವಾಗಿ ವಿವರವಾದ ಅಧ್ಯಯನ ನಡೆಯಿಸುವ ಅವಶ್ಯಕತೆ

ಇದೆ ಎಂದು ನಾನು ಭಾವಿಸಿದ್ದೇನೆ. ಕರ್ನಾಟಕ ರಾಜ್ಯದ ಕೃಷಿ ಬೆಳೆಗಳ ಇಳುವರಿ ದರ ಹಾಗೂ ಅಖಿಲ ಭಾರತ ಮಟ್ಟದಲ್ಲಿನ ಬೆಳೆಗಳ ಇಳುವರಿ ದರಗಳ ನಡುವಿನ ಅಂತರ ಕೆಲವು ಬೆಳೆಗಳ ವಿಷಯದಲ್ಲಿ ಕಡಿಮೆಯಾಗುತ್ತಿರುವುದು ಗೋಚರಿಸಿದೆ. ಅಖಿಲ ಭಾರತ ಮಟ್ಟದಲ್ಲಿ ಎಕರೆವಾರು ಇಳುವರಿ ದರದ ದೃಷ್ಟಿಯಿಂದ ೮೦ ರ ದಶಕವು ಗಣನೀಯವಾಗಿ ಏರಿಕೆಯಾದ ಅವಧಿಯಾಗಿದೆ. ಆದರೆ ಇಂತಹ ಏರಿಕೆ ಕರ್ನಾಟಕದ ಕೃಷಿಯಲ್ಲಿ ಸಂಭವಿಸಲಿಲ್ಲ.

ಪ್ರಾಯಶಃ ಕರ್ನಾಟಕದ ಕೃಷಿಯಲ್ಲಿ 'ಬಂಡವಾಳ-ಉತ್ಪನ್ನ' ಅನುಪಾತವು (capital-output ratio) ಅಧಿಕಗೊಂಡಿದೆ. ವಾಸ್ತವವಾಗಿ ಉತ್ಪನ್ನದ ಮಟ್ಟವನ್ನು ಕಾಯ್ದುಕೊಳ್ಳಲು ಹೆಚ್ಚು ಹೆಚ್ಚು ಉತ್ಪಾದನಾ ಕರ್ತೃಗಳನ್ನು ಬಳಸಬೇಕಾದ ಅವಶ್ಯಕತೆ ಉಂಟಾಗಿದೆ. ಇದರರ್ಥ ಕೃಷಿಯಲ್ಲಿ ಪ್ರತಿ ತಲಾ ಉತ್ಪನ್ನವನ್ನು ಏರಿಸಲು ಅವಶ್ಯವಾದ ಒಟ್ಟು ಹೂಡಿಕೆ ಜಾಸ್ತಿಯಾಗಿದೆ. ಈ ಅಧಿಕ ಹೂಡಿಕೆಯನ್ನು ರೈತಾಪಿವರ್ಗ ತಮ್ಮ ಆಂತರಿಕ ಮೂಲದಿಂದ ರೂಢಿಸಿಕೊಳ್ಳುವ ಸ್ಥಿತಿಯಲ್ಲಿಲ್ಲ. ಬಂಡವಾಳಶಾಹಿ ಜಮೀನ್ದಾರರು ತಮ್ಮ ಅಧಿಕ ಸಂಪತ್ತನ್ನು ನಗರ ಪ್ರದೇಶದಲ್ಲಿ ತೊಡಗಿಸುತ್ತಿದ್ದಾರೆ. ಒಟ್ಟಾರೆಯಾಗಿ ಕರ್ನಾಟಕದ ಕೃಷಿ ವಲಯದಲ್ಲಿ ಬಂಡವಾಳ ಕೊರತೆಯು ತೀವ್ರಗೊಳ್ಳುತ್ತಿದೆ.

ಸಮಗ್ರ ಸೂಚ್ಯಂಕಗಳ ಆಧಾರದ ಮೇಲೆ ನಾನು ಇಲ್ಲಿ ಕೆಲವು ಸ್ಥೂಲ ಪ್ರವೃತ್ತಿಗಳನ್ನು ಗುರುತಿಸಿದ್ದೇನೆ. ಆಹಾರ ಬೆಳೆಗೆ ಸಂಬಂಧಿಸಿದಂತೆ ಮೆಕ್ಕೆಜೋಳ (maize) ವೊಂದನ್ನು ಬಿಟ್ಟು ಉಳಿದ ಯಾವುದೇ ಬೆಳೆ ಬೆಳೆಯುವ ಪ್ರದೇಶವು ವಿಸ್ತರಣೆ ಪ್ರವೃತ್ತಿ ತೋರಿಸಿಲ್ಲ. ಕಬ್ಬು ಮತ್ತು ಎಣ್ಣೆ ಬೀಜಗಳಲ್ಲಿ ಮಾತ್ರ ಪ್ರದೇಶ ವಿಸ್ತರಣೆ ಪ್ರವೃತ್ತಿ ಕಂಡು ಬಂದಿದೆ. ಹತ್ತಿ ಬೆಳೆ ಬೆಳೆಯುವ ಪ್ರದೇಶ ವಿಸ್ತರಣೆಯಾಗಿಲ್ಲ. ವ್ಯತಿರಿಕ್ತವಾಗಿ ಅದರ ಪ್ರದೇಶ ಕಡಿಮೆಯಾಗುತ್ತಿದೆ. ವೀಳೆದೆಲೆ, ತೆಂಗಿನಕಾಯಿ ಹಾಗೂ ಬಹುಶಃ ಕಾಫಿ ಬೆಳೆಗಳಲ್ಲಿ ವಿಸ್ತರಣೆ ಪ್ರವೃತ್ತಿ ಗೋಚರಿಸಿದೆ. ಎಣ್ಣೆಕಾಳು, ಕಬ್ಬು, ವೀಳೆದೆಲೆ, ತೆಂಗಿನ ಕಾಯಿ ಹಾಗೂ ತಂಬಾಕುಗಳ ಉತ್ಪನ್ನದಲ್ಲಿ ಏರುಮುಖ ಪ್ರವೃತ್ತಿ ಕಂಡು ಬಂದಿದೆ. ಕಾಫಿಗೆ ಸಂಬಂಧಿಸಿದಂತೆ ಈ ಪ್ರವೃತ್ತಿಯು ದೃಢವಾಗಿ ಕಂಡುಬಂದಿಲ್ಲ. ಜೋಳ ಹಾಗೂ ರಾಗಿಯನ್ನು ಹೊರತುಪಡಿಸಿ ನೆಲಗಡಲೆ ಮತ್ತು ಕಬ್ಬು ಬೆಳೆಗಳಲ್ಲಿ ಇಳುವರಿ ಮಟ್ಟದಲ್ಲಿ ಏರುಮುಖ ಪ್ರವೃತ್ತಿ ಕಂಡು ಬಂದಿದೆ. ರಸಗೊಬ್ಬರದ ಬಳಕೆಯು ೮೦ ರ ದಶಕದಲ್ಲಿ ೩.೫ ಲಕ್ಷ ಟನ್‌ನಿಂದ ೮೦ರ ದಶಕದ ಮಧ್ಯಭಾಗ ಹಾಗೂ ೯೦ರ ದಶಕದ ಪ್ರಾರಂಭದ ಅವಧಿಯಲ್ಲಿ ೮ ಲಕ್ಷ ಟನ್ ಗೇರಿದೆ. ತೋಟಗಾರಿಕೆ ಬೆಳೆಗಳಲ್ಲೂ ಉತ್ಪನ್ನದಲ್ಲಿ ಏರುಮುಖ ಕಂಡುಬಂದಿಲ್ಲ. ಆದರೆ ಕೈಗಾರಿಕಾ ಉತ್ಪನ್ನದ ಸೂಚ್ಯಾಂಕವು

ಅಧಿಕಗೊಂಡಿದೆ. ರಾಷ್ಟ್ರೀಯ ಮಟ್ಟದ ಸೂಚ್ಯಂಕದ ಬೆಳವಣಿಗೆ ದರಕ್ಕಿಂತ ಹೆಚ್ಚಿನ ಮಟ್ಟದಲ್ಲಿ ಕರ್ನಾಟಕ ರಾಜ್ಯದ ಕೈಗಾರಿಕಾ ಉತ್ಪನ್ನದ ಸೂಚ್ಯಂಕವು ಏರಿಕೆಯಾಗಿದೆ. ಕಾಗದ, ಸಕ್ಕರೆ, ರೇಷ್ಮೆ ಮತ್ತು ಸಿಮೆಂಟು ಉತ್ಪನ್ನಗಳಲ್ಲಿ ಸಾಧನೆ ಸಮಾಧಾನಕರವಾಗಿದೆ. ಆದರೆ ಉಳಿದ ಉದ್ದಿಮೆಗಳಲ್ಲಿನ ಏರುಮುಖ ಪ್ರವೃತ್ತಿ ಉತ್ತಮವಾಗಿಲ್ಲ. ೧೯೯೨-೯೩ರ ವರೆಗೆ ಪ್ರತಿ ವರ್ಷ ಪ್ರಾರಂಭವಾದ ಹೊಸ ಉದ್ದಿಮೆಗಳಲ್ಲೂ ಸಹ ಹೇಳಿಕೊಳ್ಳುವಂತಹ ಏರುಮುಖ ಪ್ರವೃತ್ತಿ ಕಂಡುಬಂದಿಲ್ಲ. ಇತ್ತೀಚೆಗೆ ಪರಿಸ್ಥಿತಿ ಉತ್ತಮಗೊಂಡಿರಬಹುದೆಂದು ನಾನು ಭಾವಿಸಿದ್ದೇನೆ.

ಸ್ಥಿರ ಬೆಲೆಗಳಲ್ಲಿ ಉದ್ದಿಮೆ ವಲಯಕ್ಕೆ ನೀಡಿರುವ ಹಣಕಾಸು ನೆರವಿನ ಪ್ರಮಾಣದಲ್ಲಿ ಏರಿಕೆಯೇನೂ ಆಗಿಲ್ಲ. ೧೯೭೦-೭೧ ರಿಂದ ೧೯೮೦-೮೧ರ ಅವಧಿಯಲ್ಲಿ ವಿದ್ಯುತ್ ಉತ್ಪಾದನೆ ಇಮ್ಮಡಿಗೊಂಡಿತು. ೧೯೮೧-೮೨ ರಿಂದ ೧೯೮೫-೮೬ ರ ಅವಧಿಯಲ್ಲಿ ಅದು ಶೇ.೫೦ ರಷ್ಟು ಏರಿಕೆಯಾಯಿತು. ಆದರೆ ೧೯೮೪-೮೫ ರಿಂದ ೧೯೯೩-೯೪ ರ ಅವಧಿಯಲ್ಲಿ ವಿದ್ಯುತ್ ಉತ್ಪನ್ನದ ಏರಿಕೆ ಪ್ರಮಾಣ ಕೇವಲ ಶೇ.೨೫ ರಷ್ಟು. ವಿದ್ಯುತ್ ಉತ್ಪನ್ನದ ಏರಿಕೆ ದರವು ವಿದ್ಯುತ್ ಉತ್ಪನ್ನ ಸಾಮರ್ಥ್ಯದ ಏರಿಕೆ ದರಕ್ಕಿಂತ ಹೆಚ್ಚಿನ ಗತಿಯಲ್ಲಿದೆ. ದೇಸೀಯ ಉತ್ಪನ್ನದಲ್ಲಿ ಆಮದುವಿನ ಪರಿಮಾಣ ಅಧಿಕವಾಗುತ್ತಿದೆ. ವಿದ್ಯುತ್‌ನ ಸಂವಹನ ಹಾಗೂ ವಿತರಣೆಯಲ್ಲಿ ಹೆಚ್ಚು ವಿದ್ಯುತ್ ಪೋಲಾಗುತ್ತಿದೆ. ಕನಿಷ್ಟಪಕ್ಷ ವಿದ್ಯುತ್ ಉತ್ಪನ್ನ ಸಾಮರ್ಥ್ಯದಲ್ಲಿ ಶೇ.೧೮ ರಷ್ಟಾದರೂ ಏರಿಕೆಯಾಗದಿದ್ದರೆ ಅನತಿ ದೂರದಲ್ಲಿ ಕರ್ನಾಟಕವು 'ವಿದ್ಯುತ್ ಬರ' ಎದುರಿಸ ಬೇಕಾಗುತ್ತದೆ. ೯೦ರ ದಶಕದ ಮಧ್ಯಭಾಗದಲ್ಲಿ ಪರಿಸ್ಥಿತಿ ಉತ್ತಮಗೊಳ್ಳಬೇಕಾದರೆ ಬಂಡವಾಳ ಹೂಡಿಕೆಯ ವೇಗವು ಅಧಿಕಗೊಳ್ಳಬೇಕು.

೧೯೮೦-೮೧ ರಿಂದ ೧೯೯೦-೯೧ ರ ವರೆಗಿನ ಅವಧಿಯಲ್ಲಿ ಕರ್ನಾಟಕದ ನಿವ್ವಳ ದೇಸೀಯ ಉತ್ಪನ್ನವು ೫೬೦೦ ಕೋಟಿ ರೂಪಾಯಿಗಳಿಂದ ೯೯೦೦ ಕೋಟಿ ರೂಪಾಯಿಗಳಿಗೇರಿದೆ. ಈ ಅವಧಿಯಲ್ಲಿನ ವಾರ್ಷಿಕ ಬೆಳವಣಿಗೆ ದರವಾದ (Semi-log rate) ಶೇ.೪.೮೯ ಅಖಿಲ ಭಾರತ ಮಟ್ಟದ ಬೆಳವಣಿಗೆ ದರ ಶೇ.೫.೫ ಕ್ಕಿಂತ ಕೆಳಮಟ್ಟದಲ್ಲಿದೆ. ಆರ್ಥಿಕ ಅಭಿವೃದ್ಧಿ ಮಾನದಂಡದ ದೃಷ್ಟಿಯಿಂದ ನಾನೀಗಾಗಲೆ ತಿಳಿಸಿರುವಂತೆ ಕರ್ನಾಟಕದ ಸ್ಥಾನವು ಕೆಳಕ್ಕಿಳಿದಿದೆ.

ಬೆಳವಣಿಗೆ ಉದ್ಯೋಗ ಕ್ಷೇತ್ರದಲ್ಲೂ, ಸಾರ್ವಜನಿಕ ಕ್ಷೇತ್ರದಲ್ಲೂ ಸಂಪೂರ್ಣವಾಗಿ ಸ್ಥಗಿತಗೊಂಡ ಸ್ಥಿತಿಯಲ್ಲಿದೆ. ಅಖಿಲ ಭಾರತ ಮಟ್ಟದ ಉದ್ಯೋಗಕ್ಕೆ ಸಂಬಂಧಪಟ್ಟ ಸಮಗ್ರ ಸೂಚ್ಯಂಕಗಳಲ್ಲೂ ಸಹ ಇದೇ ಬಗೆಯ ಸ್ಥಿತಿ ಇದೆ. ಬಡತನದ ರೇಖೆ ಕೆಳಗೆ

ಇರುವವರ ಸಂಖ್ಯೆಯ ಪರಿಮಾಣವು ರಾಷ್ಟ್ರೀಯ ಮಟ್ಟದಲ್ಲಿ ಇತ್ತೀಚೆಗೆ ಏರುಮುಖಿಯಾಗಿರುವಂತೆ ಕರ್ನಾಟಕ ರಾಜ್ಯದಲ್ಲೂ ಏರುಮುಖಿಯಾಗಿದೆ.

ಕರ್ನಾಟಕದ ಹಣಕಾಸು ಸಂಪನ್ಮೂಲವು ಸಂಕೇತ ರೂಪದಲ್ಲಿ ಅಗಾಧವಾಗಿ ಬೆಳೆದಿದೆ. ೧೯೮೦-೮೧ ರಿಂದ ೧೯೯೩-೯೪ ರ ವರೆಗೆ ರಾಜ್ಯದ ಸ್ವಂತ ತೆರಿಗೆ ವರಮಾನವು ಸರಿಸುಮಾರು ೮ ಪಟ್ಟು ಏರಿಕೆಯಾಗಿದೆ. ಕೇಂದ್ರ ತೆರಿಗೆಗಳಲ್ಲಿ ಕರ್ನಾಟಕ ರಾಜ್ಯದ ಪಾಲು ೫.೫ ಪಟ್ಟು ಏರಿಕೆಯಾಗಿದೆ. ಒಟ್ಟು ತೆರಿಗೆ ವರಮಾನವು ಸುಮಾರು ೮ ಪಟ್ಟು ಏರಿಕೆಯಾಗಿದೆ. ತೆರಿಗೆಯೇತರ ವರಮಾನವು ೬ ಪಟ್ಟು ಏರಿದೆ. ಅಂದರೆ ತೆರಿಗೆಯೇತರ ವರಮಾನವು ತೆರಿಗೆ ವರಮಾನದ ಏರಿಕೆ ದರಕ್ಕೆ ಸರಿಸಮವಾಗಿ ಏರಿಕೆಯಾಗುತ್ತಿಲ್ಲ. ಬಂಡವಾಳ ಸಂದಾಯವು ೧೯೭೫-೭೬ ರಿಂದ ೧೯೮೦-೮೧ ರ ವರೆಗೆ ಇಮ್ಮಡಿಯಾಗಿದ್ದರೆ ೧೯೮೦-೮೧ ರಿಂದ ೧೯೯೩-೯೪ ಈ ಅವಧಿಯಲ್ಲಿ ೭ ಪಟ್ಟು ಅಧಿಕಗೊಂಡಿದೆ. ಒಟ್ಟಾರೆ ತೆರಿಗೆಯೇತರ ಬಾಬ್ತಿನ ವರಮಾನ ಹಾಗೂ ಬಂಡವಾಳ ಸಂದಾಯಗಳು ತೆರಿಗೆ ಬಾಬ್ತಿನಿಂದ ಬರುವ ವರಮಾನದ ಏರಿಕೆ ದರಕ್ಕಿಂತ ಕೆಳಮಟ್ಟದಲ್ಲಿ ಏರಿಕೆಯಾಗುತ್ತಿವೆ ಎಂದು ಹೇಳಬಹುದು.

ಕರ್ನಾಟಕ ರಾಜ್ಯದ ಹಣಕಾಸಿನ ನಿರ್ವಹಣೆ ವಿವೇಚನಾಶೀಲವಾಗಿದೆ ಎಂಬ ಅಭಿಪ್ರಾಯ ಕರ್ನಾಟಕ ರಾಜ್ಯದ ಹೊರಗಿನ ಅರ್ಥಶಾಸ್ತ್ರಜ್ಞರಲ್ಲಿ ಉಂಟಾಗಿದೆ. ಆದರೆ ವೆಚ್ಚ ಬಾಬ್ತಿನಲ್ಲಿ ಹಲವು ಸಮಸ್ಯೆಗಳು ತಲೆ ಎತ್ತಿವೆ. ೧೯೮೦-೮೧ ರಿಂದ ೧೯೯೩-೯೪ ರ ವರೆಗೆ ರಾಜ್ಯದ ಅಭಿವೃದ್ಧಿ ವೆಚ್ಚವು ೭ ಪಟ್ಟು ಹೆಚ್ಚಿದೆ. ಮತ್ತು ರಾಜ್ಯದ ಒಟ್ಟು ವೆಚ್ಚದಲ್ಲಿ ಅಭಿವೃದ್ಧಿ ವೆಚ್ಚದ ಪಾಲು ಸ್ವಲ್ಪ ಏರಿಕೆಯಾಗಿದೆ. ಅಭಿವೃದ್ಧಿಯೇತರ ವೆಚ್ಚದ ಪಾಲು ಸಹಜವಾಗಿ ಸ್ವಲ್ಪ ಕಡಿಮೆಯಾಗಿದೆ. ಆದರೆ ಬಂಡವಾಳ ಸಂದಾಯವು ಅಗತ್ಯವಾದ ದರದಲ್ಲಿ ಏರಿಕೆಯಾಗುತ್ತಿಲ್ಲವಾದ ಕಾರಣ ಸರ್ಕಾರದ ಬಂಡವಾಳ ವೆಚ್ಚವೂ ಸಹ ಅಗತ್ಯವಾದ ದರದಲ್ಲಿ ಏರಿಕೆಯಾಗುತ್ತಿಲ್ಲ. ರೆವಿನ್ಯೂ ವೆಚ್ಚವು ಬಂಡವಾಳ ವೆಚ್ಚಕ್ಕಿಂತ ಅಧಿಕ ದರದಲ್ಲಿ ಏರಿಕೆಯಾಗುತ್ತಿದೆ. ರೆವಿನ್ಯೂ ವೆಚ್ಚದ ಬಾಬ್ತುಗಳಲ್ಲಿ ಉತ್ಪನ್ನದ ಮೇಲೆ ಪರಿಣಾಮ ಬೀರಬಲ್ಲ ಬಾಬ್ತುಗಳು ಅಧಿಕಗೊಳ್ಳುತ್ತಿಲ್ಲ. ಹಾಗೂ ತೆರಿಗೆಯೇತರ ವರಮಾನವೂ ಅಗತ್ಯ ದರದಲ್ಲಿ ಏರಿಕೆಯಾಗುತ್ತಿಲ್ಲ. ಇದರ ಒಳಾರ್ಥವೇನೆಂದರೆ ರೆವಿನ್ಯೂ ವೆಚ್ಚದಲ್ಲಿ ಸಹಾಯಧನದ ಮೊತ್ತದ ಏರಿಕೆಯು ತೀವ್ರತರವಾಗಿದೆ.

ಇದು ಕರ್ನಾಟಕ ಸರ್ಕಾರ ಎದುರಿಸುತ್ತಿರುವ ಪ್ರಧಾನ ಸಮಸ್ಯೆಯಾಗಿದೆ. ಸರ್ಕಾರ ಹಾಗೂ ಸರ್ಕಾರದ ನೆರವಿನಿಂದ ಸ್ಥಾಪನೆಗೊಂಡ ಪ್ರತ್ಯಕ್ಷವಾಗಿ ಅಥವಾ ಪ್ರಚ್ಛನ್ನವಾಗಿ

ವಾಣಿಜ್ಯ ಮಹತ್ವ ಪಡೆದಿರುವ ಉದ್ದಿಮೆ ಮತ್ತು ಸಂಸ್ಥೆಗಳ ಮೇಲೆ ಸರ್ಕಾರವು ಅಪಾರ ಹಣ ತೊಡಗಿಸಿದೆ. ಆದರೆ ಈ ಎಲ್ಲಾ ವ್ಯವಹಾರಗಳಿಂದ ಸರ್ಕಾರಕ್ಕೆ ಸಾಕಷ್ಟು ಲಾಭಗಳಿಸುವುದು ಸಾಧ್ಯವಾಗಿಲ್ಲ. ವಾಸ್ತವವಾಗಿ ಇಲ್ಲಿ ಅಪಾರವಾದ ಸಹಾಯಧನದ ಅಂಶ ಅಡಗಿದೆ. ಪರಿಣಾಮವಾಗಿ ರೆವಿನ್ಯೂ ವೆಚ್ಚದಲ್ಲಿರುವ ಸಹಾಯಧನದ ಮೊತ್ತವನ್ನು ಕಡಿಮೆ ಮಾಡಿ, ಸಂದಾಯವನ್ನು ಅಧಿಕಗೊಳಿಸುವ ರೀತಿಯಲ್ಲಿ ವೆಚ್ಚವನ್ನು ನಿರ್ವಹಿಸಲು ಅವಕಾಶವೇ ಇಲ್ಲದಂತಾಗಿದೆ. ಬಂಡವಾಳ ವೆಚ್ಚವು ಅಗತ್ಯಕ್ಕಿಂತ ಕೆಳಮಟ್ಟದಲ್ಲಿ ಏರಿಕೆಯಾಗುತ್ತಿರುವುದರಿಂದ ಪ್ರತ್ಯಕ್ಷವಾಗಿ ಹಾಗೂ ರಾಜ್ಯ ಸರ್ಕಾರದ ಪ್ರಯತ್ನದ ಫಲವಾಗಿ ಉಂಟಾಗುವ ಬಂಡವಾಳ ಆಸ್ತಿಯ ಬೆಳವಣಿಗೆಯು ಮಂದಗತಿಯಲ್ಲಿ ಸಾಗಿದೆ.

ಈ ಬಗೆಯ ಏರ್ಪಾಡುಗಳಲ್ಲಿ ತೀವ್ರತರವಾದ ಹಣಕಾಸು ಬಿಕ್ಕಟ್ಟು ಅನಿವಾರ್ಯವಾಗುತ್ತದೆ. ಸಹಾಯಧನವು ಉಳ್ಳವರಿಂದ ಉಳಿದವರಿಗೂ ಎಂಬ ಪ್ರಶ್ನೆ ಇದೆ. ಸಹಾಯಧನದ ಹಿಂದೆ ಇರುವ ಸಾಮಾಜಿಕ ನ್ಯಾಯ ಎಂತಹುದು? ನಿಜವಾಗಲೂ ಬಡವರ ಹಿತಾಸಕ್ತಿಗಳನ್ನು ಇದು ಈಡೇರಿಸುತ್ತಿದೆಯೆ? ಇಲ್ಲಿ ಎರಡು ಸಮಸ್ಯೆಗಳಿವೆ. ಅಂತಿಮ ಫಲಾನುಭವಿಗಳಿಗಾಗಿ ಮೀಸಲಿಟ್ಟ ಮೊತ್ತದಲ್ಲಿ ಬಹುಪಾಲು ವಿತರಣಾ ಜಾಲದಲ್ಲೇ ಸೋರಿ ಹೋಗುತ್ತದೆ. ಎರಡನೆಯದಾಗಿ ಅಂತಿಮ ಫಲಾನುಭವಿಗಳಲ್ಲಿ ಭ್ರಷ್ಟಾಚಾರದಿಂದಾಗಿ ನಿಜವಾದ-ಅರ್ಹವ್ಯಕ್ತಿಗಳಿಗೆ ಫಲ ದೊರೆಯುವುದಿಲ್ಲ. ಆಯ್ಕೆ ಮಾಡಿದ ಫಲಾನುಭವಿಗಳು ನಿಜವಾಗಲೂ ಸಮಾಜದ ದುರ್ಬಲ ವರ್ಗವಾಗಿರುವ ಸನ್ನಿವೇಶದಲ್ಲಿ ಈ ಪ್ರಶ್ನೆಗಳು ಮುಖ್ಯವಾಗುತ್ತವೆ.

ಒಂದಾನೊಂದು ಕಾಲದಲ್ಲಿ ಸರ್ಕಾರಿ ಯಂತ್ರವು ಪ್ರಾಮಾಣಿಕವಾಗಿರುತ್ತದೆ. ಪಕ್ಷಪಾತ ರಹಿತವಾಗಿರುತ್ತದೆ. ನಿರ್ಲಿಪ್ತವಾಗಿರುತ್ತದೆ ಎಂದು ಪರಿಭಾವಿಸಲಾಗಿತ್ತು. ಆದರೆ ಇಂದು ಅಂಥಹ ಪರಿಸ್ಥಿತಿ ಇಲ್ಲ. ಇಂತಹ ಸನ್ನಿವೇಶದಲ್ಲಿ ಸರ್ಕಾರದ ವೆಚ್ಚವು ನಿಗದಿಪಡಿಸಿದ ಗುರಿಗಳನ್ನು ಈಡೇರಿಸುತ್ತದೆ ಎಂದು ನಿರೀಕ್ಷಿಸಲು ಸಾಧ್ಯವಿಲ್ಲ. ಕರ್ನಾಟಕದಲ್ಲಿ ಸಮಸ್ಯೆಗಳು ಒಂದರೊಡನೊಂದು ಹೆಣೆದುಕೊಂಡುಬಿಟ್ಟಿವೆ. ಏಕೆಂದರೆ ಒಂದು ವೇಳೆ ಸರ್ಕಾರವೇನಾದರೂ ಕ್ರಮ ತೆಗೆದುಕೊಳ್ಳಬೇಕೆಂದು ನಿರ್ಧರಿಸಿದ ತಕ್ಷಣವೇ ಅಂತಹ ಕ್ರಮಗಳನ್ನು ತಡೆಯುವ ಸಲುವಾಗೇ ಪಟ್ಟಭದ್ರ ಹಿತಾಸಕ್ತಿಗಳು ತಲೆ ಎತ್ತಿ ಬಿಡುತ್ತವೆ. ಸಾರ್ವಜನಿಕರ ಕಲ್ಯಾಣಕ್ಕೆ ಬದ್ಧರಾದ ರಾಜಕೀಯ ನೇತಾರರು ಅಧಿಕಾರಕ್ಕೆ ಬಂದರೆ ಇವೆಲ್ಲಾ ಸರಿಯಾಗುತ್ತವೆ ಎಂಬುದರ ಬಗ್ಗೆ ನನಗೆ ಅನುಮಾನವಿಲ್ಲ. ಇಂಥಹ ವ್ಯಾಪಕ ಭ್ರಷ್ಟಾಚಾರ ಅಸ್ತಿತ್ವದಲ್ಲಿರುವ ಸನ್ನಿವೇಶದಲ್ಲಿ ಮುಕ್ತ ಮಾರುಕಟ್ಟೆಯನ್ನು ಅಳವಡಿಸಿಕೊಳ್ಳುವುದರಿಂದ ರೋಗವು ಸರ್ಕಾರೇತರ

ವಲಯಕ್ಕೂ ಹರಡುವ ಸಾಧ್ಯತೆ ಇದೆ. ಪ್ರಬಲವಾದ ಹಾಗೂ ಪ್ರಾಮಾಣಿಕವಾದ, ಕನಿಷ್ಟ ಕರ್ತವ್ಯಗಳನ್ನಾದರೂ ಈಡೇರಿಸುವ ಶಕ್ತಿಯುಳ್ಳ, ಪಕ್ಷಪಾತರಹಿತವಾದ ಸರ್ಕಾರವು ಮತದಾರರ ಕನಸಾಗಿದೆ.

ಜಾತಿ ಬೇದ-ಭಾವಗಳನ್ನೆಲ್ಲಾ ಬದಿಗಿಟ್ಟು ನೋಡಿದಾಗ ಕರ್ನಾಟಕದಲ್ಲಿ ಕಂಡು ಬರುವ ಪ್ರಧಾನ ಆರ್ಥಿಕ ಸಮಸ್ಯೆಗಳೆಂದರೆ-ಬಡತನ, ನಿರುದ್ಯೋಗ, ಅಸಮಾನತೆ, ಬೃಹತ್ ಜನಸಂಖ್ಯೆ, ಮಿತಿ ಮೀರಿದ ಜನ ಸಂಖ್ಯೆಯ ಬೆಳವಣಿಗೆ ದರ, ಶ್ರಮ ಹಾಗೂ ಉಳಿದ ಉತ್ಪಾದನಾಂಗಗಳ ಕೆಳಮಟ್ಟದ ಉತ್ಪನ್ನ ಶಕ್ತಿ, ಕೆಳಮಟ್ಟದ ಉಳಿತಾಯ, ಸಾಮಾಜಿಕ ಹಾಗೂ ಆರ್ಥಿಕ ಸೌಲಭ್ಯಗಳ ಅಸಮರ್ಪಕ ನಿರ್ವಹಣೆ, ಸರ್ಕಾರದ ನೆರವಿನಿಂದ ನಡೆಯುವ ಸಾಮಾಜಿಕ ಸೇವಾ ವಲಯದಲ್ಲಿ ಕೆಳಮಟ್ಟದ ಕಾರ್ಯಾಚರಣೆ, ತೀವ್ರತರವಾದ ಲಿಂಗ ಪ್ರಭೇದದಲ್ಲಿ ಪಕ್ಷಪಾತ. ಇವೆಲ್ಲಕ್ಕೂ ಸಾಮಾನ್ಯ ಜನರ ಬದುಕಿನ ಮೇಲೆ ಪರಿಣಾಮ ಬೀರಬಲ್ಲ ಸಾರ್ವಜನಿಕ ವಿತರಣಾ ವ್ಯವಸ್ಥೆಯಲ್ಲಿರುವ ಅಸಾಮಾನ್ಯ ಭ್ರಷ್ಟಾಚಾರವನ್ನೂ ಸೇರಿಸಬೇಕು. ಆರ್ಥಿಕ ಸಮಸ್ಯೆಗಳು ಉಲ್ಬಣಗೊಳ್ಳುತ್ತಿವೆ. ಕಾರಣವೇನೆಂದರೆ ಕರ್ನಾಟಕವು ಪ್ರಾಕೃತಿಕ ಸಂಪನ್ಮೂಲಗಳನ್ನು ಸಮೃದ್ಧವಾಗೇನೂ ಪಡೆದಿಲ್ಲ. ಸುಲಭದಲ್ಲಿ ಅಭಿವೃದ್ಧಿ ಪಡಿಸಬಹುದಾದ ಜಲ ವಿದ್ಯುತ್ ಸಾಮರ್ಥ್ಯವನ್ನೆಲ್ಲಾ ನುಣ್ಣಗೆ ಮಾಡಿದಂತೆ ಕಾಣುತ್ತಿದೆ. ಕಬ್ಬಿಣ ಅದಿರು ಅಪಾರವಾಗಿದೆ. ಆದರೆ ಕಲ್ಲಿದ್ದಲು ಬಹುದೂರದಿಂದ ಬರಬೇಕು. ಕೃಷಿ ಉತ್ಪನ್ನದ ಸ್ಥಗಿತತೆಯ ಜೊತೆಗೆ ಬರಗಾಲವೂ ನಮ್ಮನ್ನು ಕಾಡುತ್ತಿದೆ. ಸಕ್ಕರೆ, ಸಿಮೆಂಟು, ರೇಷ್ಮೆ, ಶ್ರೀಗಂಧ, ತಂಬಾಕು, ಕಾಫಿ, ಅಡಕೆ, ತೆಂಗಿನಕಾಯಿ, ತೋಟಗಾರಿಕೆ ಬೆಳೆ ಮತ್ತು ಇತ್ತೀಚೆಗೆ ವಿವಿಧ ವಿದ್ಯುನ್ಮಾನ ಸರಕುಗಳು - ಈ ಕ್ಷೇತ್ರಗಳಲ್ಲಿ ಕರ್ನಾಟಕವು ಅನುಕೂಲಕರ ಸ್ಥಾನದಲ್ಲಿದೆ. ತಾಂತ್ರಿಕ ಸೇವಾ ಕ್ಷೇತ್ರದಲ್ಲಿ ಹಾಗೂ ತರಬೇತಿ ಪಡೆದ- ಕುಶಲ ಕೆಲಸಗಾರರ ದೃಷ್ಟಿಯಿಂದ ಕರ್ನಾಟಕವು ಉತ್ತಮ ಸ್ಥಾನದಲ್ಲಿದೆ. ಸಾಮಾನ್ಯ ಕಾರ್ಮಿಕರ ಕ್ಷೇತ್ರದಲ್ಲಿ ಸಮಸ್ಯೆಗಳಿವೆ. ಪ್ರವಾಸೋದ್ಯಮದಲ್ಲೂ ನಮ್ಮ ಸ್ಥಾನ ಉತ್ತಮವಾಗೇನೂ ಇಲ್ಲ. ಮುಕ್ತ ಆರ್ಥಿಕ ವ್ಯವಸ್ಥೆಯಲ್ಲಿ ನಮಗೆ ಅನುಕೂಲಕರವಾದ ಕ್ಷೇತ್ರ ಹಾಗೂ ಉತ್ಪನ್ನಗಳ ಉತ್ಪಾದನೆ ಹಾಗೂ ಮಾರಾಟವನ್ನು ಹೆಚ್ಚು ರೂಢಿಸಿಕೊಳ್ಳಬೇಕಾಗುತ್ತದೆ. ವಿಶೇಷ ಪರಿಣಿತಿಯಿಂದ ಹೆಚ್ಚು ಫಲವನ್ನು ಪಡೆಯುವ ಮಾರ್ಗ ಇದಾಗಿದೆ. ನಮ್ಮ ಹಲವು ಉತ್ಪನ್ನಗಳು ಹಾಗೂ ಸೇವೆಗಳು ಅಂತಾರಾಷ್ಟ್ರೀಯ ಮಟ್ಟದಲ್ಲೂ ಅನುಕೂಲಗಳನ್ನು ಹೊಂದಿವೆ. ಇಂತಹ ಸರಕು ಹಾಗೂ ಸೇವೆಗಳಿಗೆ ಆಂತರಿಕ ಮಾರುಕಟ್ಟೆಗಿಂತ ವಿಶಾಲವಾದ ಮಾರುಕಟ್ಟೆ ಅವಕಾಶವಿದೆ. ಈ ಬಗೆಯ ಅನುಕೂಲಗಳನ್ನು ಕಾಯ್ದುಕೊಳ್ಳಲು ಉತ್ಪನ್ನ ಶಕ್ತಿ, ಗುಣ ಮಟ್ಟ ಹಾಗೂ ಮಾರುಕಟ್ಟೆ ಸುಧಾರಣೆಗಳ ಕಡೆಗೆ ಸದಾ ಗಮನ ನೀಡಬೇಕಾಗುತ್ತದೆ.

ಬಂಡವಾಳವನ್ನು ಹಾಗೂ ತಂತ್ರಜ್ಞಾನವನ್ನು ಹೊರಗಿನಿಂದ ಆಕರ್ಷಿಸಲು ರಾಜ್ಯದ ಆರ್ಥಿಕತೆಯನ್ನು ದಕ್ಷತೆಯ ಹೆದ್ದಾರಿಯಲ್ಲಿ ಮೊದಲು ನಿಲ್ಲಿಸಬೇಕು. ಹೀಗೆ ಹೊರಗಿನಿಂದ ಬಂದ ಉದ್ಯಮಗಳ ಆಸ್ತಿ-ಪಾಸ್ತಿ ಹಾಗೂ ಜೀವನದ ರಕ್ಷಣೆಯ ಭರವಸೆ ನೀಡಬೇಕಾಗುತ್ತದೆ. ಉದ್ಯಮಗಳ ಯಂತ್ರಗಳು ಹಾಗೂ ನೌಕರರ ಮೇಲೆ ನಡೆಯಬಹುದಾದ ಹಲ್ಲೆಯ ವಿರುದ್ಧ ಸಾಕಷ್ಟು ರಕ್ಷಣೆಯ ಅವಶ್ಯಕತೆ ಇದೆ. ಇವೆಲ್ಲಕಿಂತ ಹೆಚ್ಚಾಗಿ ಉದ್ದಿಮೆಗಳು ಕೆಲಸ ಮಾಡಲು ಹಿತಕರವಾದ ಪರಿಸರ ಬೇಕಾಗುತ್ತದೆ. ಎಲ್ಲಾ ರಾಜಕೀಯ ಪಕ್ಷಗಳು ಮತ್ತು ದುರೀಣರು ಈ ಕೆಲಸದಲ್ಲಿ ಒಂದಾಗಿ ಸಹಾಯ ನೀಡಬೇಕು. ಈ ಕಾರಣಕ್ಕಾಗೆ ವಿದೇಶಿ ಬಂಡವಾಳ ಮತ್ತು ತಂತ್ರಜ್ಞಾನ ನಮಗೆ ಯಾಕೆ ಬೇಕು ಎಂಬುದರ ಬಗ್ಗೆ ಸಾರ್ವಜನಿಕರಿಗೆ ತಿಳುವಳಿಕೆ ಇರಬೇಕು. ಇಲ್ಲದಿದ್ದರೆ ವಿವೇಚನಾ ರಹಿತ ಪ್ರತಿಭಟನೆಗಳು ತಲೆ ಎತ್ತುತ್ತವೆ.

ರಾಜ್ಯದ ಸಮಸ್ಯೆಗಳನ್ನು ದೀರ್ಘಾವಧಿ ದೃಷ್ಟಿಕೋನದಿಂದ ಚಿಂತಿಸುವ ಮನೋಸ್ಥೈರ್ಯವನ್ನು ದುರೀಣರು ಮೈಗೂಡಿಸಿಕೊಳ್ಳಬೇಕಾಗಿದೆ. ಸಣ್ಣ - ಪುಟ್ಟ ವಿಷಯಗಳಿಗೆಲ್ಲಾ ಪ್ರತಿಭಟನೆ ಕಿಡಿ ಹಾರಿಸುವ ದುರದೃಷ್ಟ ನಮ್ಮ ದೇಶದಲ್ಲಿದೆ. ಅಧಿಕಾರದಲ್ಲಿರುವ ಸರ್ಕಾರಗಳು ಅನ್ಯಾಯಕ್ಕೆ ಒಳಗಾದ ಪಕ್ಷಗಳಿಗೆ ರಕ್ಷಣೆ ಒದಗಿಸುವುದರಲ್ಲಿ ವಿಫಲವಾಗಿವೆ ಎಂದು ಹೇಳಲು ವಿಷಾದಿಸುತ್ತೇನೆ.

ಬಂಡವಾಳ ಮತ್ತು ಅಮೂರ್ತವಾದ ತಂತ್ರಜ್ಞಾನ ಬೇಕು. ಆದರೆ ಹೊರಗಿನಿಂದ ನೌಕರರು ಬೇಡ ಎಂದು ಹೇಳಲಾಗುತ್ತಿದೆ. ಹೊರಗಿನಿಂದ ಹರಿದು ಬರುವ ಬಂಡವಾಳವು ಸಾಮಾನ್ಯ ಕಾರ್ಮಿಕರನ್ನೇನೂ ತರುವುದಿಲ್ಲ. ಭಾಷಾ ಭೇದ-ಭಾವಗಳನ್ನು ಮರೆತು ರಾಷ್ಟ್ರೀಯ ಮಾರುಕಟ್ಟೆಯಿಂದ ಉಳಿದ ನೌಕರರನ್ನು ಪಡೆಯುವ ಅವಶ್ಯಕತೆ ಇದೆ. ದೀರ್ಘಾವಧಿ ದೃಷ್ಟಿಕೋನದಿಂದ ನೌಕರ ವರ್ಗಕ್ಕೆ ಹಾಗೂ ಅವರ ಮಕ್ಕಳಿಗೆ ಜಾಗತಿಕ ಸೌಲಭ್ಯದ ಅಗತ್ಯ ಇರುತ್ತದೆ. ಬಹುಶಃ ಬೆಂಗಳೂರು ಇಂತಹ ಜಾಗತಿಕ ಮಹಾನಗರವಾಗಿದೆ. ರಾಜ್ಯದ ಉದ್ದಿಮೆ ವಲಯದ ಸರ್ವಾಂಗೀಣ ಪ್ರಗತಿಯು ಮಹಾನಗರೀಕರಣ ಗುಣವನ್ನು ಅಗಾಧವಾಗಿ ಬೆಳೆಸುತ್ತಿದೆ. ಕೇರಳದಲ್ಲಿ ಅಪಾರ ಹೂಡಿಕೆ ಬಂಡವಾಳವಿದೆ. ಆದರೆ ಅಗತ್ಯವಾದ ಉದ್ದಿಮೆಗಳನ್ನೆಲ್ಲಾ ಆಂತರಿಕವಾಗೇ ಬೆಳೆಸಬಲ್ಲ ಸ್ಥಿತಿಯಲ್ಲಿ ಕೇರಳವಿಲ್ಲ. ಇದಕ್ಕೆ ಕಾರಣಗಳು ಸ್ಪಷ್ಟವಾಗೇ ಇವೆ. ಪಶ್ಚಿಮ ಬಂಗಾಳದ ಮುಖ್ಯಮಂತ್ರಿಗಳು ಹೊರಗಿನಿಂದ ಬಂಡವಾಳ ಹಾಗೂ ತಂತ್ರಜ್ಞಾನ ಆಕರ್ಷಿಸುವ ಅವಶ್ಯಕತೆ ಬಗ್ಗೆ ಆ ರಾಜ್ಯದ ಬುದ್ಧಿಜೀವಿ ಹಾಗೂ ಶ್ರಮಿಕ ವರ್ಗದ ಮನವೊಲಿಸುತ್ತಿದ್ದಾರೆ. ಈ ಉದಾಹರಣೆಯನ್ನು ಕರ್ನಾಟಕ ಅನುಸರಿಸಲು ಸಾಧ್ಯವೆ? ಒಂದು ವೇಳೆ ಮೂಲ ಸೌಲಭ್ಯ ಕ್ಷೇತ್ರಗಳಲ್ಲಿನ ತೊಡಕುಗಳನ್ನು ನಿವಾರಿಸಿದರೆ

ಕರ್ನಾಟಕವು ಹೊರಗಿನಿಂದ ಅಪಾರ ಪ್ರಮಾಣದಲ್ಲಿ ಬಂಡವಾಳ, ಉದ್ದಿಮೆ ಮತ್ತು ತಂತ್ರಜ್ಞಾನವನ್ನು ಆಕರ್ಷಿಸಬಹುದು. ಆಂತರಿಕ ಸನ್ನಿವೇಶವನ್ನು ಸ್ವೀಕಾರಾರ್ಹವನ್ನಾಗಿ ಮಾಡಬೇಕಾಗಿದೆ. ಇದಕ್ಕೆ ಎಲ್ಲಾ ಪಕ್ಷಗಳ ದುರೀಣರಲ್ಲೂ ಮುತ್ಸದ್ದಿತನ ಬೇಕಾಗುತ್ತದೆ. ಇದು ಬಹು ಮುಖ್ಯ ಸವಾಲಾಗಿದೆ.

ಆದರೆ ಕೈಗಾರಿಕಾಭಿವೃದ್ಧಿಯು ಬಡತನ ಹಾಗೂ ನಿರುದ್ಯೋಗಗಳಿಗೆ ಪರಿಹಾರವಿಲ್ಲ. ಇದಕ್ಕೆ ಕೃಷಿ ಹಾಗೂ ಗ್ರಾಮೀಣಾಭಿವೃದ್ಧಿಯ ಅವಶ್ಯಕತೆ ಇದೆ. ಮಾರುಕಟ್ಟೆಗೆ ಸರಬರಾಜು ಮಾಡುವಷ್ಟು ಅಧಿಕ್ಯ ಉಂಟಾದಾಗ ಮಾತ್ರ ಜೀವನಾವಶ್ಯಕತೆಗಳನ್ನು ಸರಬರಾಜು ಮಾಡುವ ಕ್ಷೇತ್ರವನ್ನೂ ಸೇರಿಸಿಕೊಂಡು ಸೇವಾ ವಲಯದಲ್ಲಿ ಉದ್ಯೋಗದ ಅವಕಾಶಗಳು ವಿಸ್ತರಿಸುತ್ತವೆ. ಇತ್ತೀಚೆಗೆ ನಾನು 'ಕೂಲಿ ಸರಕುಗಳ ಆರ್ಥಿಕತೆ'ಗೆ ಸಂಬಂಧಿಸಿದ ಮೀಮಾಂಸೆಯ ಪೂರ್ಣ ಪಾಠವನ್ನು ಸಿದ್ಧಗೊಳಿಸಿದ್ದೇನೆ. ಪ್ರಕಾಶಕರು ಅದನ್ನು ಬಿಡುಗಡೆಗೊಳಿಸಬೇಕಾಗಿದೆ. ಆ ವಿಷಯದ ಬಗ್ಗೆ ಇಲ್ಲಿ ನಾನೇನೂ ಹೇಳುವುದಿಲ್ಲ. ಅದು ರಾಷ್ಟ್ರೀಯ ಮಟ್ಟದ ಅಧ್ಯಯನವಾಗಿದೆ. ಭಾರತವು ತನ್ನೆಲ್ಲಾ ಪ್ರಧಾನ ಆರ್ಥಿಕ ಸಮಸ್ಯೆಗಳನ್ನೆಲ್ಲಾ ಸುಸಂಗತವಾಗಿ ಮತ್ತು ಆ ಮೀಮಾಂಸೆ ಮಾರ್ಗದರ್ಶನದಲ್ಲಿ ಎದುರಿಸಬಲ್ಲದು.

ಉದಾರವಾದೀಕರಣ, ಜಾಗತೀಕರಣ ಹಾಗೂ ಮುಕ್ತ ಮಾರುಕಟ್ಟೆಗಳು ಉನ್ನತ ವರಮಾನ ವರ್ಗವನ್ನು ಸರ್ಕಾರದ ಅವಲಂಬನೆಯಿಂದ ಬಿಡುಗಡೆಗೊಳಿಸುತ್ತವೆ. ಹೊರಗಿನಿಂದ ಹರಿದುಬರುವ ಬಂಡವಾಳದಿಂದ ಅತ್ಯಧಿಕ ಪ್ರಯೋಜನವು ನಗರ ಪ್ರದೇಶಕ್ಕೆ ಮತ್ತು ವಿಶೇಷವಾಗಿ ಕೈಗಾರಿಕಾ ಹಾಗೂ ಕೈಗಾರಿಕೆಗೆ ಸಂಬಂಧಿಸಿದ ಚಟುವಟಿಕೆಗಳಿಗೆ ದೊರೆಯುತ್ತದೆ. ಗ್ರಾಮೀಣ ಪ್ರದೇಶದ ಬಹುದೊಡ್ಡ ಸಮೂಹಕ್ಕೆ ಮತ್ತು ನಗರ ಪ್ರದೇಶದಲ್ಲಿರುವ ಕೆಳಮಟ್ಟದ ವರಮಾನ ವರ್ಗಕ್ಕೆ ಅನುಕೂಲಗಳು ಕೇವಲ ಮೊಟ್ಟೆಕ್ಕುತ್ತವೆ. ಹೀಗೆ ಸೌಲಭ್ಯ-ಪ್ರಯೋಜನಗಳಲ್ಲಿನ ವಿಭೇದವು ತೀವ್ರಗೊಳ್ಳುತ್ತಲೇ ನಡೆಯುತ್ತಿದೆ. ಉಳ್ಳವರು ಖಾಸಗಿ ಶಾಲೆಗೆ, ಖಾಸಗಿ ಕಾಲೇಜಿಗೆ, ದುಬಾರಿ ತಾಂತ್ರಿಕ, ಎಂಜಿನಿಯರಿಂಗ್ ಹಾಗೂ ವೈದ್ಯಕೀಯ ಸಂಸ್ಥೆಗಳಿಗೆ, ಖಾಸಗಿ ನರ್ಸಿಂಗ್ ಹೋಮ್‌ಗಳಿಗೆ, ಖಾಸಗಿ ಆಸ್ಪತ್ರೆಗಳಿಗೆ ಹೋಗುತ್ತಾರೆ. ಇದರರ್ಥವೇನೆಂದರೆ ಉಳಿದವರು ಅಂದರೆ ಬಹುಪಾಲು ಬಡವರ್ಗದವರು ಸರ್ಕಾರಿ ಶಾಲೆಗೆ, ಸರ್ಕಾರಿ ಕಾಲೇಜಿಗೆ, ತಾಂತ್ರಿಕ ಸಂಸ್ಥೆಗಳಿಗೆ, ಸಾರ್ವಜನಿಕ ಆಸ್ಪತ್ರೆಗಳಿಗೆ ಹೋಗಬೇಕಾಗುತ್ತದೆ. ಈ ಬಗೆಯ ವಿಭೇದವು ಸಾರಿಗೆ ಹಾಗೂ ಸಂಪರ್ಕ ಕ್ಷೇತ್ರದಲ್ಲೂ ತೀವ್ರಗೊಳ್ಳುತ್ತದೆ. ಬಡವರು ಬಸ್ಸು, ರೈಲು, ಅಂಚೆ ಮತ್ತು ತಂತಿ ಕಛೇರಿಗಳನ್ನು ಅವಲಂಬಿಸುತ್ತಾರೆ. ಹೀಗೆ ಎರಡು ಜಗತ್ತುಗಳು ಸೃಷ್ಟಿಯಾಗುತ್ತವೆ. ಸರ್ಕಾರಿ ಆಡಳಿತಗಾರರು, ಶಾಸಕರು ಹಾಗೂ

ನೌಕರರ ಸಂಘಟಿತ ವಲಯದಲ್ಲಿರುವವರು ಯಾವುದೇ ಮಾನದಂಡದಿಂದಲೂ ಬಡವರು ಎಂದೆನಿಸಿಕೊಳ್ಳಲು ಸಾಧ್ಯವಿಲ್ಲ. ಸಹಜವಾಗಿ ಸರ್ಕಾರದ ಜವಾಬ್ದಾರಿಯು ಹೆಚ್ಚು ಹೆಚ್ಚು ಬಡವರ್ಗದ, ಅಗತ್ಯಗಳಿರುವ ವರ್ಗದ ಮತ್ತು ದರಿದ್ರ ವರ್ಗದ ಪರವಾಗಿರಬೇಕಾಗುತ್ತದೆ. ಭ್ರಷ್ಟಾಚಾರ ಹಾಗೂ ಸೋರುವಿಕೆಗಳು ಈಗ ಗಂಭೀರ ಸಂಗತಿಗಳಾಗುತ್ತವೆ. ಆದರೆ ಸರ್ಕಾರವು ಬಡವರ ಹಿತಕಾಪಾಡುವ ಉದ್ದೇಶಕ್ಕೆ ಹೊಸದಾಗಿ ತನ್ನನ್ನು ತಾನು ಅರ್ಪಿಸಿಕೊಳ್ಳಬೇಕಾಗುತ್ತದೆ.

ಬಡವರ ದುಃಖ-ದುಮ್ಮಾನಗಳು ಪತ್ರಿಕೋದ್ಯಮದಲ್ಲಾಗಲಿ ಅಥವಾ ಇತರೆ ಮಾಧ್ಯಮಗಳಲ್ಲಾಗಲಿ ಅಥವಾ ಶಾಸನಸಭೆಗಳಲ್ಲಾಗಲಿ ಪ್ರತಿಫಲಗೊಳ್ಳುವುದಿಲ್ಲ. ನಿಜಕ್ಕೂ ನೋವು-ಸಂಕಟ ಯಾವ ವರ್ಗದಲ್ಲಿದೆ ಎಂಬುದನ್ನು ಕಂಡು ಹಿಡಿಯಲು ಹೊಸ ಮಾರ್ಗಗಳನ್ನು ಅನ್ವೇಷಿಸಬೇಕಾಗಿದೆ. ವರಮಾನ ಮತ್ತು ಅನುಭೋಗಗಳಲ್ಲಿ ತೀವ್ರತರವಾದ ಅಸಮಾನತೆಯಿರುವ ಸಮಾಜದಲ್ಲಿ ಸರ್ಕಾರವು ಉನ್ನತ ವರ್ಗದ ಹಿತಕಾಪಾಡುವ ಕಾಳಜಿವಹಿಸುವ ಅವಶ್ಯಕತೆ ಇಲ್ಲ. ಸಮಾಜದ ನಾಗರಿಕ ಗುಣಗಳನ್ನು ಹಾಗೂ ಕಾನೂನು-ಶಾಂತಿ-ಸುವ್ಯವಸ್ಥೆಯನ್ನು ಕಾಪಾಡುವ ದೃಷ್ಟಿಯಿಂದ ಎಲ್ಲಾ ವರ್ಗವನ್ನು ಮಾತ್ರ ಸಮಾನವಾಗಿ ನೋಡಬೇಕಾಗಿದೆ. ಸಾರ್ವಜನಿಕ ಸಂಸ್ಥೆಗಳ ಕಾರ್ಯವಿಧಾನದ ಬಗ್ಗೆ ಇಂತಹ ದೃಷ್ಟಿಕೋನದ ಅವಶ್ಯಕತೆ ಇದೆ ಎನ್ನುವುದೇ ನನ್ನ ಒತ್ತಾಸೆ.

# ಭವಿಷ್ಯದ ಕರ್ನಾಟಕದ ಆರ್ಥಿಕ ಸ್ವರೂಪ

**ಡಾ. ಅಬ್ದುಲ್ ಅಜೀಜ್**

ಇಂತಹ ಒಂದು ವಿಷಯವನ್ನು ಕುರಿತು ಚರ್ಚಿಸುವಾಗ ನನ್ನ ಮುಂದೆ ಏಳುವ ಪ್ರಶ್ನೆಗಳು ಹೀಗಿರುತ್ತವೆ: ಭವಿಷ್ಯತ್ತಿನ ಕರ್ನಾಟಕದ ಆರ್ಥಿಕತೆ ಹೇಗಿರಬೇಕು? ಅದು ಹಾಗೆ ಬೆಳೆದು ಬರುವ ಸಾಧ್ಯತೆ ಉಂಟೆ? ಹಾಗೆ ಬೆಳೆಸಲು ಕೈಗೊಳ್ಳಬೇಕಾದ ಕಾರ್ಯಕ್ರಮಗಳು ಯಾವುವು? ಈ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕುವುದೇ ಪ್ರಸ್ತುತ ಪ್ರಬಂಧದ ಉದ್ದೇಶ.

ಯಾವುದೇ ಆರ್ಥಿಕತೆಯು ಭವಿಷ್ಯತ್ತಿನಲ್ಲಿ ಹೇಗಿರಬೇಕೆಂಬುದನ್ನು ಆರ್ಥಿಕ ಚಿಂತನೆಯನ್ನು ಆಧರಿಸಿ ಒಂದು ಮೌಲಿಕ ಮಾದರಿಯನ್ನು ಸೃಷ್ಟಿಸಿಕೊಂಡು ತಿಳಿಯಹೇಳಬಹುದು. ಹೀಗೆ ಭವಿಷ್ಯತ್ತಿನ ಕರ್ನಾಟಕದ ಆರ್ಥಿಕತೆಯು ಹೆಚ್ಚಿನ ದರದಲ್ಲಿ ನಿರಂತರವಾಗಿ ಬೆಳೆಯುವಂತಹದಾಗಿರಬೇಕು ಹಾಗೂ ತನ್ಮೂಲಕ ಪೂರ್ಣ ಉದ್ಯೋಗ ಸ್ಥಿತಿಯನ್ನು ಹೊಂದಿ ನಿರುದ್ಯೋಗ, ಬಡತನ, ಬೆಲೆ ಏರಿಕೆಗಳ ಸ್ಥಿತಿಗಳನ್ನು ತೊಡೆದುಹಾಕಿ ರಾಜ್ಯದ ಎಲ್ಲಾ ವರ್ಗಗಳಿಗೂ ಸಾಮಾಜಿಕ ನ್ಯಾಯವನ್ನು ದೊರಕಿಸಿ ಕೊಡುವಂತಾಗಬೇಕು. ಅಂದರೆ, ನಮ್ಮ ಆರ್ಥಿಕತೆಯು ಮುಂದಿನ ಕೆಲವೇ ವರ್ಷಗಳಲ್ಲಿ ಹುಲೀಕರಣ ಹೊಂದಿ ಹುಲಿಯಂತೆ ಘರ್ಜಿಸಿಕೊಂಡು ತೀವ್ರವಾದ ವೇಗದಲ್ಲಿ ಮುನ್ನುಗ್ಗಬೇಕು. ಇದಲ್ಲದೆ ನಮ್ಮ ದೇಶದ ಹಿರಿಯ ಅರ್ಥಶಾಸ್ತ್ರಜ್ಞ ಪ್ರೊಫೆಸರ್ ವಿ.ಕೆ.ಆರ್ .ವಿ.ರಾವ್ ಅವರು ಒಂದು ಸಂದರ್ಭದಲ್ಲಿ ನುಡಿದಂತೆ ನಮ್ಮ ಕರ್ನಾಟಕ ನಾಡು ಆದ್ಯಾತ್ಮಿಕತೆ ಹಾಗೂ ಸೌಹಾರ್ದತೆಯನ್ನು ಬೆಳೆಸಿಕೊಂಡು ಬರಬೇಕಾಗಿದೆ.

ಮೇಲೆ ನಿರೂಪಿಸಿದ ಮಾದರಿಯ ಆರ್ಥಿಕತೆಯನ್ನು ಕರ್ನಾಟಕದಲ್ಲಿ ಭವಿಷ್ಯತ್ತಿನಲ್ಲಿ ಸೃಷ್ಟಿ ಮಾಡುವ ಸಾಧ್ಯತೆ ಉಂಟೆ? ಹಾಗೆ ಮಾಡಲು ಯಾವ ಬಗೆಯ ವ್ಯೂಹವನ್ನು ರಚಿಸಬೇಕು. ಈ ಎರಡು ಪ್ರಶ್ನೆಗಳನ್ನು ಉತ್ತರಿಸಬೇಕಾದರೆ ಕರ್ನಾಟಕದ ಭೂತ ಮತ್ತು ಪ್ರಸ್ತುತ ಕಾಲಗಳ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಬೇಕು. ಅದರ ಆಧಾರದ ಮೇಲೆ ಮುಂದಿನ ಹತ್ತು ವರ್ಷಗಳಲ್ಲಿ ಕರ್ನಾಟಕದಲ್ಲಿ ಉಂಟಾಗಬಹುದಾದ ಆರ್ಥಿಕಾಭಿವೃದ್ಧಿಯ ನಿರೀಕ್ಷೆ ಏನು ಎಂಬುದಾಗಿ ಯೋಚಿಸೋಣ.

ಹಿಂದಿನ ವರ್ಷಗಳಲ್ಲಿ ಕರ್ನಾಟಕದ ಆರ್ಥಿಕಾಭಿವೃದ್ಧಿಯನ್ನು ಗಮನಿಸಿದಾಗ ಕಂಡು

ಬರುವ ಅಂಶಗಳು ಹೀಗಿವೆ: ಪ್ರಾರಂಭದಲ್ಲಿ ಅಂದರೆ ೧೯೬೦ ರ ದಶಕದಲ್ಲಿ ಅದರ ಬೆಳವಣಿಗೆಯ ದರವು ಸಾಲಿಯಾನ ಶೇ.ನಾಲ್ಕಕ್ಕೂ ಮೀರಿದ್ದು ಅದು ನಮ್ಮ ರಾಷ್ಟ್ರದ ಆರ್ಥಿಕತೆಯ ಬೆಳವಣಿಗೆಯ ದರವಾದ ೩.೮ ಕ್ಕಿಂತ ಮೇಲ್ಮಟ್ಟದಲ್ಲಿತ್ತು. ಆದರೆ ೧೯೭೦ ಮತ್ತು ೮೦ರ ದಶಕಗಳಲ್ಲಿ ಈ ದರವು ಶೇ.೪.೮ಕ್ಕೆ ಏರಿದ್ದರೂ ರಾಷ್ಟ್ರದ ದರವಾದ ಶೇ.೫.೩ಕ್ಕಿಂತ ಕಡಿಮೆಯಾಗಿತ್ತು. ಈ ಪ್ರವೃತ್ತಿಯನ್ನು ೧೯೯೦ ರ ದಶಕದಲ್ಲಿಯೂ ನಾವು ಕಾಣಬಹುದು. ಹೀಗೆ ಈ ದರವು ೧೯೯೦-೯೧ರಲ್ಲಿ ಶೇ.೦.೦೪, ೧೯೯೧-೯೨ರಲ್ಲಿ ಶೇ. ೧೨.೪, ೧೯೯೨-೯೩ರಲ್ಲಿ ಶೇ. ೨ ಹಾಗೂ ೧೯೯೩-೯೪ರಲ್ಲಿ ಶೇ.೨.೫ ಆಗಿತ್ತು. ಈ ಬಗೆಯ ಸರಿಸುಮಾರು ತಟಸ್ಥ ಆರ್ಥಿಕ ಬೆಳವಣಿಗೆಗೆ ಕಾರಣ ಕೃಷಿ ಮತ್ತು ಕೈಗಾರಿಕಾರಂಗಗಳಲ್ಲಿ ಉತ್ಪಾದನೆಯ ದರವು ತಟಸ್ಥ ಹೊಂದಿರುವುದು.

ಕೃಷಿಪ್ರಧಾನವಾದ ನಮ್ಮ ರಾಜ್ಯ ರಾಷ್ಟ್ರದ ಕೃಷಿ ರಂಗಕ್ಕಿಂತ ತೀರಾ ಕಡಿಮೆ ದರದ ಪ್ರಗತಿಯನ್ನು ತೋರಿಸುತ್ತಿರುವುದು ಒಂದು ಆಶ್ಚರ್ಯಕರವಾದ ಸಂಗತಿ. ಹೀಗೆ ೧೯೮೦ ರ ದಶಕದಲ್ಲಿ ಈ ದರವು ರಾಷ್ಟ್ರದಲ್ಲಿ ಸಾಲಿಯಾನ ಶೇ.೪ ರಷ್ಟಾದರೆ ಕರ್ನಾಟಕದಲ್ಲಿ ಕೇವಲ ಶೇ.೨.೭ ರಷ್ಟಿತ್ತು. ಹಾಗೂ ಆಹಾರ ಧಾನ್ಯಗಳ ಉತ್ಪಾದನೆಯಲ್ಲೂ ನಾವು ಹಿಂದುಳಿದಿರುವುದು ಶೋಚನೀಯವಾದ ವಿಷಯ. ಈ ಅವಧಿಯಲ್ಲಿ ಆಹಾರ ಧಾನ್ಯಗಳ ಉತ್ಪಾದನೆ ಸಾಲಿಯಾನ ಶೇ.೦.೪ರ ದರದಲ್ಲಿ ಏರಿಕೆಯನ್ನು ತೋರಿಸಿತ್ತು. ಅಲ್ಲದೆ ೧೯೯೦ ರ ದಶಕದಲ್ಲಿ ಪರಿಸ್ಥಿತಿ ತೀರಾ ಹದಗೆಟ್ಟಿದೆ. ೧೯೯೦-೯೧ ರಲ್ಲಿ ಕೃಷಿ ಉತ್ಪನ್ನದಲ್ಲಿ ಶೇ.೧೦ ರಷ್ಟು ಇಳಿಕೆ ಉಂಟಾಗಿದೆ. ನಂತರದ ಎರಡು ವರ್ಷಗಳಲ್ಲಿ ಏರಿಕೆ ಕಂಡುಬಂದರೂ ೧೯೯೩-೯೪ ರಲ್ಲಿ ಮತ್ತೆ ಇಳಿಯಿತು. ಉದಾಹರಣೆಗೆ, ೧೯೯೨-೯೩ ರಲ್ಲಿ ಆಹಾರ ಧಾನ್ಯಗಳ ಉತ್ಪಾದನೆಯು ೮೭ ಲಕ್ಷ ಟನ್‌ಗಳ ಮಟ್ಟ ಮುಟ್ಟಿದ್ದು ೧೯೯೩-೯೪ ರಲ್ಲಿ ೭೮ ಲಕ್ಷ ಟನ್‌ಗಳಿಗೆ ಇಳಿದಿದೆ. ಇದೆಲ್ಲಕ್ಕೂ ಕಾರಣ ಒಂದು ಕಡೆ ಮಳೆರಾಯನ ಮರ್ಜಿಯಾದರೆ ಇನ್ನೊಂದು ಕಡೆ ನೀರಾವರಿ ಸೌಕರ್ಯದ ಅಭಾವ. ರಾಷ್ಟ್ರಕ್ಕೆ ಹಾಗೂ ಅಕ್ಕಪಕ್ಕದ ರಾಜ್ಯಗಳಿಗೆ ಹೋಲಿಸಿದ್ದೇ ಆದರೆ, ನಮ್ಮಲ್ಲಿನ ನೀರಾವರಿ ಸೌಕರ್ಯ ತೀರಾ ಕಡಿಮೆ. ಹೀಗೆ ನಮ್ಮ ರಾಷ್ಟ್ರದಲ್ಲಿ ನೀರಾವರಿ ಸೌಕರ್ಯ ಪಡೆದಿರುವ ಉಳುಮೆಯಲ್ಲಿರುವ ಜಮೀನಿನ ಪ್ರಮಾಣ ಶೇ.೩೩.೩ಆಂಧ್ರದಲ್ಲಿ ಶೇ.೩೯.೧. ತಮಿಳುನಾಡಿನಲ್ಲಿ ಶೇ.೪೨.೫ ಆದರೆ ಕರ್ನಾಟಕದಲ್ಲಿ ಅದರ ಪ್ರಮಾಣ ಕೇವಲ ಶೇ.೨೦.೪ ಆಗಿದೆ.

ಕೃಷಿರಂಗದಂತೆಯೇ ಕೈಗಾರಿಕಾ ಕ್ಷೇತ್ರದಲ್ಲೂ ಉತ್ಪಾದನೆಯ ದರ ಕಡಿಮೆಗೊಂಡು ರಾಷ್ಟ್ರದ ಸರಾಸರಿ ದರಕ್ಕಿಂತ ಕೆಳಮಟ್ಟದಲ್ಲಿ ಇರುವುದನ್ನೂ ಕಾಣಬಹುದು. ೧೯೮೧-೮೨

ರಿಂದ ೧೯೯೧-೯೨ರ ಅವಧಿಯಲ್ಲಿ ರಾಷ್ಟ್ರದ ದರವು ಶೇ. ೭ ರಿಂದ ೮ ರಷ್ಟಿತ್ತು. ಆದರೆ ಕರ್ನಾಟಕದಲ್ಲಿ ಈ ದರವು ಶೇ. ೬ .೪ ರಷ್ಟಿತ್ತು. ಮುಂದಿನ ಎರಡು ವರ್ಷಗಳಲ್ಲಿ ಈ ದರವು ಶೇ.೧.೮ ಮತ್ತು ಶೇ.೪ ಕ್ಕೆ ಇಳಿಕೆಯಾಯಿತು. ಈ ಇಳಿಕೆಗೆ ಒಂದು ಪ್ರಬಲವಾದ ಕಾರಣವೆಂದರೆ ಇತ್ತೀಚಿನ ವಿದ್ಯುಚ್ಛಕ್ತಿ ಮತ್ತು ಇಂಧನದ ಉತ್ಪಾದನೆಯಲ್ಲಿ ಕುಂಠಿತವಾಗಿರುವುದೇ ಆಗಿದೆ. ಇಲ್ಲಿ ಕೆಲವು ಅಂಕಿ-ಅಂಶಗಳನ್ನು ಕೊಡುವುದಾದರೆ ಭಾರತದಲ್ಲಿ ವಿದ್ಯುಚ್ಛಕ್ತಿಯಲ್ಲಿ ಕಂಡು ಬರುವ ಅಭಾವದ ಪ್ರಮಾಣ ಬರುವ ಶೇ.೭.೩ ಆದರೆ, ಕರ್ನಾಟಕದಲ್ಲಿ ಇದರ ಪ್ರಮಾಣ ಶೇ.೨೧.೯.

ಕರ್ನಾಟಕದ ಆರ್ಥಿಕತೆಯಲ್ಲಿ ಈ ಬಗೆಯ ಏರುಪೇರಿನ ಬೆಳವಣಿಗೆ ಕಂಡು ಬಂದರೂ ಕೆಲವು ಅಪೇಕ್ಷಿತ ಸ್ವರೂಪಕ ಬದಲಾವಣೆಗಳು ಉಂಟಾಗಿರುವುದು ಗಮನಾರ್ಹ.

**ಪಟ್ಟಿ: ಒಂದು**

**ರಾಜ್ಯದ ಶೇಕಡಾವಾರು ವಲಯಗಳ ಉತ್ಪತ್ತಿ**

| ವಲಯಗಳು | ೧೯೬೦-೬೧ ಈಗಿನ ದರಗಳಲ್ಲಿ | ೧೯೬೯-೭೦ ೧೯೬೦-೬೧ರ ದರಗಳಲ್ಲಿ | ೧೯೭೯-೮೦ ೧೯೭೦-೭೧ರ ದರಗಳಲ್ಲಿ | ೧೯೮೯-೯೦ ೧೯೮೦-೮೧ರ ದರಗಳಲ್ಲಿ |
|---|---|---|---|---|
| ಪ್ರಾಥಮಿಕ | ೬೧.೨೫ | ೫೭.೯೦ | ೫೩.೯೮ | ೩೭.೫೧ |
| ದ್ವಿತೀಯ | ೧೫.೧೬ | ೧೮.೩೮ | ೧೯.೩೪ | ೨೩.೬೭ |
| ತೃತೀಯ | ೨೩.೫೮ | ೨೩.೭೨ | ೨೬.೬೭ | ೩೮.೮೨ |

**ಪಟ್ಟಿ: ಎರಡು**

**ಶೇಕಡಾವಾರು ವಲಯಗಳಲ್ಲಿ ವಿತರಿತ ಕೆಲಸಗಾರರು**

| ವಲಯಗಳು | ೧೯೬೧ | ೧೯೭೧ | ೧೯೮೧ |
|---|---|---|---|
| ಪ್ರಾಥಮಿಕ | ೭೩.೬೯ | ೭೧.೩೪ | ೭೧.೦೮ |
| ದ್ವಿತೀಯ | ೧೨.೩೧ | ೧೧.೯೯ | ೧೩.೫೨ |
| ತೃತೀಯ | ೧೪.೦೦ | ೧೬.೬೭ | ೧೫.೪೦ |

ಪಟ್ಟಿ ಒಂದರಲ್ಲಿ ತೋರಿಸಿರುವಂತೆ ೧೯೬೦-೬೧ ಮತ್ತು ೧೯೮೯-೯೦ರ ಅವಧಿಯಲ್ಲಿ ರಾಜ್ಯದ ಒಟ್ಟು ಆದಾಯದಲ್ಲಿನ ಪ್ರಾಥಮಿಕ ವಲಯದ ಪಾಲು ಇಳಿಕೆಗೊಂಡಿದೆ ಹಾಗೂ ದ್ವಿತೀಯ ಮತ್ತು ತೃತೀಯ ವಲಯದ ಪಾಲುಗಳು

ಏರಿಕೆಗೊಂಡಿವೆ. ಈ ಬಗೆಯ ಆರ್ಥಿಕತೆಯಲ್ಲಿನ ವಿನ್ಯಾಸಕ ಬದಲಾವಣೆಯು ನಮ್ಮ ಆರ್ಥಿಕತೆಯು ಅಭಿವೃದ್ಧಿ ಪಥದಲ್ಲಿ ನಡೆದು ಹೋಗುತ್ತಿದೆ ಎಂದು ಸೂಚಿಸುತ್ತದೆ. ಆದರೆ, ಕೇವಲ ಈ ವಿನ್ಯಾಸಿಕ ಬದಲಾವಣೆಯ ಆಧಾರದ ಮೇಲೆ ಮಾತ್ರ ನಮ್ಮ ಆರ್ಥಿಕತೆಯು ಅಭಿವೃದ್ಧಿ ಪಥದಲ್ಲಿದೆಯೆಂದು ಹೇಳುವುದಕ್ಕಾಗುವುದಿಲ್ಲ. ಏಕೆಂದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ಮೂರು ವಲಯಗಳಲ್ಲಿ ನಿರತವಾಗಿರುವ ಜನಶಕ್ತಿ ಪ್ರಮಾಣದ ವಿನ್ಯಾಸಿಕ ಬದಲಾವಣೆ ಇದೇ ಪಥದಲ್ಲಿ ಸಾಗುವುದು ಕಾಣುತ್ತಿಲ್ಲ. ಉದಾಹರಣೆಗೆ ಪಟ್ಟಿ ಎರಡರಲ್ಲಿ ತೋರಿಸಿರುವಂತೆ ೧೯೬೧ ರಲ್ಲಿ ಪ್ರಾಥಮಿಕ ವಲಯದಲ್ಲಿ ನಿರತರಾದವರ ಪ್ರಮಾಣವು ಶೇ.೭೩.೭ ಇದ್ದು ೧೯೮೧ ರಲ್ಲಿ ಅದು ಶೇ.೭೧ಕ್ಕೆ ಮಾತ್ರ ಇಳಿಯಿತು. ಇದೇ ಅವಧಿಯಲ್ಲಿ ದ್ವಿತೀಯ ಮತ್ತು ತೃತೀಯ ಕ್ಷೇತ್ರಗಳಲ್ಲಿ ಈ ಅಂಕಿಗಳು ಕ್ರಮವಾಗಿ ಶೇ.೧೨.೩ ರಿಂದ ಶೇ.೧೩.೫ ಮತ್ತು ಶೇ.೧೪ ರಿಂದ ಶೇ.೧೫.೪ ಕ್ಕೆ ವೃದ್ಧಿಸಿದೆ. ಅಂದಮೇಲೆ, ನಮ್ಮ ರಾಜ್ಯದ ಆರ್ಥಿಕತೆಯ ಆದಾಯದಲ್ಲಿ ಪ್ರಾಥಮಿಕ ವಲಯದ ಪಾಲು ತೀವ್ರ ಪ್ರಮಾಣದಲ್ಲಿ ಕ್ಷೀಣಿಸಿದರೂ ಸಹ ಅದರಲ್ಲಿ ನಿರತರಾಗಿರುವ ಜನಶಕ್ತಿಯ ಪ್ರಮಾಣ ಮಾತ್ರ ಅನುಗುಣವಾಗಿ ಕ್ಷೀಣಿಸಿಲ್ಲ. ಈ ಬಗೆಯ ಆರ್ಥಿಕ ಬೆಳವಣಿಗೆಯನ್ನು ಗಮನಿಸಿದಾಗ ಕೆಲವು ಅಂಶಗಳು ನಮ್ಮ ಗಮನಕ್ಕೆ ಬರುತ್ತವೆ. ಮೊದಲನೆಯದಾಗಿ, ನಮ್ಮಲ್ಲುಂಟಾದ ಆರ್ಥಿಕಾಭಿವೃದ್ಧಿಯು ಕಡಿಮೆ ಉತ್ಪಾದನಾ ಶಕ್ತಿಯುಳ್ಳ ಪ್ರಾಥಮಿಕ ವಲಯದಿಂದ ಅಧಿಕ ಉತ್ಪಾದನಾ ಶಕ್ತಿಯುಳ್ಳ ದ್ವಿತೀಯ ಮತ್ತು ತೃತೀಯ ವಲಯಗಳಿಗೆ ಜನಶಕ್ತಿಯನ್ನು ವರ್ಗಾಯಿಸುವುದರಲ್ಲಿ ಅಸಮರ್ಥವಾಗಿದೆ. ಎರಡನೆಯದಾಗಿ, ಎಷ್ಟೇ ಪ್ರಮಾಣದ ಆರ್ಥಿಕಾಭಿವೃದ್ಧಿ ಉಂಟಾದರೂ ಕರ್ನಾಟಕದಲ್ಲಿ ಇಂದೂ ಸಹ ಸುಮಾರು ಮುಕ್ಕಾಲು ಪಾಲು ಜನಸಂಖ್ಯೆ ಪ್ರಾಥಮಿಕ ವಲಯದಲ್ಲೇ ಉದ್ಯೋಗ ಮಾಡಿಕೊಂಡು ಜೀವನ ನಿರ್ವಹಿಸುತ್ತಿದೆ. ಮೂರನೆಯದಾಗಿ, ಪ್ರಾಥಮಿಕ ವಲಯದಲ್ಲಿ ನಿರತರಾಗಿರುವವರ - ಅಂದರೆ ಗ್ರಾಮೀಣ ಜನರ-ಉತ್ಪಾದನಾ ಶಕ್ತಿಯಲ್ಲಿ ಅನುಕ್ರಮವಾದ ಏರಿಕೆಯಾಗಲಿಲ್ಲ ಎಂದರ್ಥ. ಎಂದಮೇಲೆ ಕೃಷಿಯೇತರ ಕ್ಷೇತ್ರಗಳಿಗೆ ಹೋಲಿಸಿದರೆ ಅವರ ಆದಾಯದಲ್ಲಿ ಗಮನಾರ್ಹವಾದ ಏರಿಕೆ ಕಂಡುಬರುವುದಿಲ್ಲವೆಂದೂ ಅರ್ಥವಾಗುತ್ತದೆ. ಆದಕಾರಣ ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳಲ್ಲಿನ ಆರ್ಥಿಕ ಅಸಮಾನತೆಯು ಇನ್ನಷ್ಟು ವಿಸ್ತಾರಗೊಂಡಿದೆ ಎಂದು ಹೇಳಬಹುದು.

ಮತ್ತೊಂದು ವಿಷಯವೆಂದರೆ, ಕರ್ನಾಟಕದಲ್ಲಿ ಯೋಜನಾ ಕಾರ್ಯಗತಿಯನ್ನು ಕೈಗೊಂಡಿದ್ದರೂ ಸಹ ಬಡತನ ಮತ್ತು ನಿರುದ್ಯೋಗ ಸಮಸ್ಯೆಗಳು ಎಂದಿನಂತೆ ಮುಂದುವರಿದಿವೆ. ೧೯೮೯ - ೯೦ ರಲ್ಲಿ ಬಡತನ ರೇಖೆಗಿಂತ ಕೆಳಗಿರುವವರ ಪ್ರಮಾಣ

ಶೇ.೪೫ ಎಂದು ಸರ್ಕಾರಿ ವಲಯ ಅಂದಾಜು ಮಾಡಿತ್ತು. ಇದು ರಾಷ್ಟ್ರಮಟ್ಟಕ್ಕಿಂತ ೫ ಅಂಕಿಗಳಷ್ಟು ಹೆಚ್ಚಾಗಿತ್ತು. ಹಾಗೂ ೧೯೯೦ರ ದಶಕದಲ್ಲಿ ಉಂಟಾದ ತೀವ್ರ ಪ್ರಮಾಣದ ಬೆಲೆ ಏರಿಕೆಯ ಕಾರಣ ರಾಷ್ಟ್ರದಲ್ಲಿ ಬಡತನದ ಪ್ರಮಾಣವು ಇಂದು ಶೇ.೪೯ಕ್ಕೆ ಏರಿದೆ ಎಂದು ತಿಳಿದುಬರುತ್ತದೆ. ಬೆಲೆ ಏರಿಕೆಯ ಪ್ರಖರತೆಯು ದೇಶದ ಎಲ್ಲಾ ರಾಜ್ಯಗಳಿಗೂ ತಟ್ಟಿರುವುದರಿಂದ ಕರ್ನಾಟಕದಲ್ಲಿಯೂ ಬಡತನದ ಪ್ರಮಾಣ ಇತ್ತೀಚೆಗೆ ಏರಿರುವುದರಲ್ಲಿ ಅನುಮಾನವಿಲ್ಲ. ಇದಲ್ಲದೆ, ನೂತನ ಆರ್ಥಿಕ ನೀತಿಯ ಕಾರಣ ನಿರುದ್ಯೋಗ ಪ್ರಮಾಣವು ಕೊನೆಯ ಪಕ್ಷ ಮೊದಲನೆಯ ಹಂತಗಳಲ್ಲಿ ಹೆಚ್ಚಾಗುವ ಸಂಭವವಿದೆ. ಇದರ ತೀಕ್ಷ್ಣತೆ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುವ ಸಾಧ್ಯತೆ ಉಂಟು.

ಕರ್ನಾಟಕದಲ್ಲಿ ಆರ್ಥಿಕಾಭಿವೃದ್ಧಿಯನ್ನು ತ್ವರಿತಗೊಳಿಸುವ ಪ್ರಯತ್ನ ನಡೆದಿದ್ದರೂ ಸಹ ಬಡತನ, ನಿರುದ್ಯೋಗ, ಆರ್ಥಿಕ ಅಸಮಾನತೆಗಳು ಮುಂದುವರಿದಿರುವುದು ಒಂದು ಅಸಂಗತವೇ ಸರಿ. ಇಂತಹ ಅಸಂಗತಕ್ಕೆ ಕಾರಣವೆಂದರೆ ಯೋಜನಾ ಕಾರ್ಯಗತಿಯಲ್ಲಿ ಇಲ್ಲಿಯತನಕ ಕೈಗೊಂಡಂತಹ ಅಭಿವೃದ್ಧಿ, ವ್ಯೂಹದ ಸ್ವಭಾವ. ಇಲ್ಲಿಯತನಕ ಯೋಜನೆಗಳನ್ನು ರಾಜಧಾನಿಯಲ್ಲಿಯೇ ಕುಳಿತು ತಜ್ಞರು ರಚಿಸಿದ ಕಾರಣ, ಸ್ಥಳೀಯ ಸ್ಥಿತಿಗತಿಗಳಿಗೆ ಅನುಗುಣವಾಗಿ ಅವು ರೂಪಿತಗೊಳ್ಳಲಿಲ್ಲ ಹಾಗೂ ಅವುಗಳ ಅನುಷ್ಠಾನದಲ್ಲೂ ತೊಂದರೆ ಉಂಟಾಯಿತು. ಇದಲ್ಲದೆ ಹೆಚ್ಚು ಪ್ರಮಾಣದಲ್ಲಿ ಬೃಹತ್ ಯೋಜನೆಗಳನ್ನು ಕೈಗೊಂಡ ಕಾರಣ ಅವುಗಳಿಂದ ಸಾಮಾನ್ಯ ಜನರಿಗೆ ಬೇಕಾಗುವಂತಹ ಉದ್ಯೋಗಾವಕಾಶಗಳ ಸೃಷ್ಟಿಯು ತಕ್ಕ ಪ್ರಮಾಣದಲ್ಲಿ ಆಗಲಿಲ್ಲ. ಹೀಗಾಗಿ, ಯೋಜನೆಗಳ ಕಾರಣ ನಮ್ಮ ಆರ್ಥಿಕತೆಯಲ್ಲಿ ಸ್ವಲ್ಪಮಟ್ಟಿಗೆ ಅಭಿವೃದ್ಧಿ ಉಂಟಾದರೂ ಇದು ಗ್ರಾಮೀಣ ಪ್ರದೇಶಕ್ಕಿಂತ ಹೆಚ್ಚಾಗಿ ಪಟ್ಟಣಗಳಲ್ಲಿ, ಸಾಮಾನ್ಯ ಜನರಿಗಿಂತ ಹೆಚ್ಚಾಗಿ, ಸಂಪನ್ಮೂಲಗಳ ಮೇಲೆ ನಿಯಂತ್ರಣವುಳ್ಳ ಐಶ್ವರ್ಯವಂತ ವರ್ಗಗಳಲ್ಲಿ ಕಾಣಿಸಿಕೊಂಡಿರುವುದು ಸ್ವಾಭಾವಿಕ. ಈ ನ್ಯೂನತೆಗಳನ್ನು ತೊಡೆದು ಹಾಕುವ ದೃಷ್ಟಿಯಿಂದ ಇತ್ತೀಚೆಗೆ ರಾಜ್ಯದಲ್ಲಿ ವಿಕೇಂದ್ರಿಕೃತ ಯೋಜನೆಗಳನ್ನು ಕೈಗೊಳ್ಳಲಾಯಿತು. ಈ ಯೋಜನೆಗಳಲ್ಲಿ ಮುಖ್ಯವಾಗಿ ಗ್ರಾಮೀಣ ಜನರ ಮೂಲಭೂತ ಅವಶ್ಯಕತೆಗಳನ್ನು ತೃಪ್ತಿಪಡಿಸುವಂತಹ ಕಾರ್ಯಕ್ರಮಗಳನ್ನು - ಎಂದರೆ ವಯಸ್ಕರ ಶಿಕ್ಷಣ, ಶಾಲಾ ಮಟ್ಟದ ವಿದ್ಯಾಭ್ಯಾಸ, ಸಾಮೂಹಿಕ ಆರೋಗ್ಯ ಸೇವೆ, ಕುಡಿಯುವ ನೀರಿನ ಸರಬರಾಜು, ವಸತಿ ಸೌಕರ್ಯ ಹಾಗೂ ಸಾರ್ವಜನಿಕ ಅವಶ್ಯಕ ವಸ್ತುಗಳ ವಿತರಣೆ - ರಚಿಸಲು ಪ್ರಾರಂಭ ಮಾಡಲಾಗಿತ್ತು. ಈ ಒಂದು ಚೌಕಟ್ಟಿಗೆ ಅಂಟಿಕೊಂಡು ಸ್ಥಳೀಯ ಮಟ್ಟದಲ್ಲಿ ಭೂಮಿ, ನೀರು, ಮತ್ತು ಶಕ್ತಿಗಳಂತಹ ಸಂಪನ್ಮೂಲಗಳ ಸಮಗ್ರ ಅಭಿವೃದ್ಧಿಯ ಯೋಜನೆಗಳನ್ನು ರೂಪಿಸಿಕೊಂಡುದಲ್ಲದೆ ಇಂತಹ ಕಾರ್ಯಗತಿಯನ್ನು

ಉಪಕ್ರಮಿಸಲು ಬೇಕಾದಂತಹ ಕುಶಲ ಮತ್ತು ತಾಂತ್ರಿಕ ಜನಶಕ್ತಿಯನ್ನು ತರಬೇತಿ ಮಾಡಿ ಒದಗಿಸುವ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿತ್ತು.

ಆದರೆ ೧೯೬೨ ರಿಂದೀಚೆಗೆ ಪಂಚಾಯ್ತಿ ರಾಜ್ಯ ಸಂಸ್ಥೆಗಳಿಗೆ ಚುನಾವಣೆ ನಡೆಸದೆ ಅರ್ಥಪೂರ್ಣವಾದ ವಿಕೇಂದ್ರೀಕರಣಕ್ಕೆ ಸಡ್ಡು ಒಡೆಯಲಾಗಿ ಈ ಸಂಸ್ಥೆಗಳನ್ನು ಆಡಳಿತ ವರ್ಗಗಳಿಗೆ ವಹಿಸಿಕೊಡಲಾಯಿತು. ಆದಕಾರಣ, ಸರಿಯಾದ ರೀತಿಯಲ್ಲಿ ಗ್ರಾಮೀಣಾಭಿವೃದ್ಧಿಯನ್ನು ಪ್ರವರ್ತನಗೊಳಿಸುತ್ತಿದ್ದ ಸಾಂಸ್ಥಿಕ ವ್ಯವಸ್ಥೆಯನ್ನು ಕಿತ್ತು ಒಗೆದಂತಾಯಿತು. ಇದರಿಂದಾಗಿ ಗ್ರಾಮೀಣ ಅಭಿವೃದ್ಧಿಯ ಕಾರ್ಯಗತಿಯು ಸ್ಥಗಿತಗೊಂಡಿರುವುದರಲ್ಲಿ ಆಶ್ಚರ್ಯವಿಲ್ಲ. ಆದರೆ ಈಚೆಗೆ ಇದರ ಬಗ್ಗೆ ಒಂದು ಹೊಸ ಆಶಯ ಉಂಟಾಗಿದೆ. ೧೯೯೪ ರಲ್ಲಿ ಗ್ರಾಮಪಂಚಾಯ್ತಿಗಳಿಗೆ ಚುನಾವಣೆಗಳನ್ನು ಮಾಡಿ ಪ್ರಸ್ತುತ ವರ್ಷದ ಮಾರ್ಚ್ ತಿಂಗಳಲ್ಲಿ ತಾಲೂಕು ಮತ್ತು ಜಿಲ್ಲಾ ಪಂಚಾಯ್ತಿಗಳಿಗೆ ಚುನಾವಣೆ ನಡೆಸುವ ಸಂಭವವಿದೆ. ಇದಲ್ಲದೆ ಇಂದಿನ ಸರ್ಕಾರ ಇನ್ನುಮುಂದೆ ಗ್ರಾಮೀಣಾಭಿವೃದ್ಧಿಯ ಯೋಜನೆಗಳಿಗೆ, ಹೆಚ್ಚಿನ ಪ್ರಮಾಣದ ಹಣಕಾಸು ವಿನಿಯೋಗಿಸುವ ನಿರೀಕ್ಷೆಯೂ ಇದೆ. ಇಂತಹ ನೂತನ ಅಭಿವೃದ್ಧಿಯ ವ್ಯೂಹದ ಕಾರಣ ಭವಿಷ್ಯತ್ ಕರ್ನಾಟಕದ ಆರ್ಥಿಕಾಭಿವೃದ್ಧಿ ಪಥದಲ್ಲಿ ಕೆಲವು ಹೊಸದಾದ ಹೆಗ್ಗುರುತುಗಳನ್ನು ನಿರೀಕ್ಷಿಸಬಹುದು. ಇಂತಹ ಹೆಗ್ಗುರುತುಗಳ ಪೈಕಿ ಎರಡನ್ನು ಇಲ್ಲಿ ಪ್ರಸ್ತಾಪಿಸಬಹುದು. ಒಂದನೆಯದಾಗಿ, ಕರ್ನಾಟಕದ ಆರ್ಥಿಕತೆ ಭವಿಷ್ಯತ್ತಿನಲ್ಲಿ ಹೆಚ್ಚಿನ ದರದಲ್ಲಿ ಬೆಳೆಯುವ ಸಾಧ್ಯತೆ. ಎರಡನೆಯದಾಗಿ, ಈ ಕಾರಣದಿಂದ ರಾಜ್ಯದಲ್ಲಿ ಹೆಚ್ಚಿನ ದರದ ಉದ್ಯೋಗಾವಕಾಶಗಳು ಬೆಳೆಯುವ ಸಾಧ್ಯತೆ ಹಾಗೂ ನಿರುದ್ಯೋಗ ಮತ್ತು ಬಡತನ ಇಳಿಕೆಗೊಳ್ಳುವ ಸಂಭವ. ಈ ಅಂಶಗಳನ್ನು ಕುರಿತು ಸ್ವಲ್ಪ ವಿವರವಾಗಿ ಚರ್ಚಿಸುವುದು ಅವಶ್ಯಕವೆನಿಸುತ್ತದೆ.

ಗ್ರಾಮೀಣಾಭಿವೃದ್ಧಿಯನ್ನು ಪ್ರವರ್ತನಗೊಳಿಸುವ ಯೋಜನೆಗಳಿಗೆ ಆದ್ಯತೆಯನ್ನು ಕೊಟ್ಟು ಇದಕ್ಕಾಗಿ ಹೆಚ್ಚು ಪ್ರಮಾಣದ ಹಣವನ್ನು ಹೂಡುವ ಕಾರಣ ಬಂಡವಾಳ-ಉತ್ಪಾದನಾ ಪರಿಮಾಣ ಭವಿಷ್ಯತ್ತಿನಲ್ಲಿ ಕಡಿಮೆಯಾಗುವ ಸಂಭವವಿದೆ. ರಾಷ್ಟ್ರಮಟ್ಟದಲ್ಲಿ ಇಂತಹ ಒಂದು ನಿರೀಕ್ಷೆ ಇರುವುದರಿಂದ ಕರ್ನಾಟಕದಲ್ಲಿಯೂ ಸಹ ಈ ನಿರೀಕ್ಷೆಯನ್ನು ಇಟ್ಟುಕೊಳ್ಳುವುದರಲ್ಲಿ ತಪ್ಪೇನಿಲ್ಲ. ಹೀಗಾದ ಪಕ್ಷದಲ್ಲಿ ನಮ್ಮ ಉಳಿತಾಯ ಪರಿಮಾಣ ಈಗ ಇದ್ದ ಪ್ರಮಾಣದಲ್ಲಿ ಉಳಿದುಕೊಂಡರೂ ಸಹ ರಾಜ್ಯದ ಆರ್ಥಿಕತೆಯ ಆದಾಯವು ಹಿಂದಿನದಕ್ಕಿಂತ ಹೆಚ್ಚಿನ ದರದಲ್ಲಿ ಬೆಳೆಯುವುದು ಖಂಡಿತ ಎಂದಮೇಲೆ, ನಮ್ಮ ಆರ್ಥಿಕ ಬೆಳವಣಿಗೆಯು ಮುಂದಿನ ದಶಕದಲ್ಲಿ ತೀವ್ರಗೊಳ್ಳುವ ನಿರೀಕ್ಷೆ ಇದೆ ಎಂದು ಹೇಳಬಹುದು.

ಆದರೆ ಈ ನಿರೀಕ್ಷೆಯು ಫಲಪ್ರದವಾಗಬೇಕಾದರೆ, ಮೂರು ಷರತ್ತುಗಳು

ಈಡೇರಬೇಕು. ಮೊದಲನೆಯದಾಗಿ, ನಮ್ಮ ಉಳಿತಾಯದ ಪರಿಮಾಣ ಹಾಗೂ ಬಂಡವಾಳ ನಿರ್ಮಾಣದ ದರ ಭವಿಷ್ಯತ್ತಿನಲ್ಲಿ ಯಾವುದೇ ಕಾರಣದಿಂದ ಕುಂಠಿತಗೊಳ್ಳಬಾರದು. ಎರಡನೆಯದಾಗಿ, ಕೈಗಾರಿಕಾ ಕ್ಷೇತ್ರಕ್ಕೆ ಸರಿಯಾದ ಪ್ರಮಾಣದಲ್ಲಿ ವಿದ್ಯುತ್ ಪೂರೈಕೆಯಾಗದೆ ಅದರ ಬೆಳವಣಿಗೆ ದರವು ಕುಂಠಿತವಾಗಬಾರದು. ಮೂರನೆಯದಾಗಿ, ನಮ್ಮ ಆರ್ಥಿಕತೆಯು ಬರಪೀಡನೆಗೆ ಒಳಗಾಗದೆ ನಮ್ಮಲ್ಲಿ ಕಾಲಕಾಲಕ್ಕೆ ಮಳೆ ಬೆಳೆ ಸರಿಯಾಗಿ ಆಗಬೇಕು ಹಾಗೂ ಸರ್ಕಾರವು ನೀರಾವರಿ ಸೌಲಭ್ಯದ ಪ್ರಮಾಣವನ್ನು ಹೆಚ್ಚಿಸಬೇಕು.

ಈಗಿನ ಪರಿಸ್ಥಿತಿಯನ್ನು ಗಮನಿಸಿದ್ದೆ ಆದರೆ ಮೊದಲನೆಯ ಷರತ್ತನ್ನು ಈಡೇರಿಸುವುದು ಅನುಮಾನ. ಏಕೆಂದರೆ, ಸಾಮಾನ್ಯ ಬೆಲೆ ಮಟ್ಟವು ಇತ್ತೀಚಿನ ವರ್ಷ ಗಳಲ್ಲಿ ಅಧಿಕ ದರದಲ್ಲಿ ಏರುತ್ತಿದೆ. ಉದಾಹರಣೆಗೆ, ೧೯೯೧-೯೨ ರಲ್ಲಿ ಈ ದರವು ಶೇ ೧೩.೯, ೧೯೯೨-೯೩ ರಲ್ಲಿ ಶೇ ೧೦.೧, ೧೯೯೩-೯೪ ರಲ್ಲಿ ಶೇ.೮.೫ ಹಾಗೂ ಇತ್ತೀಚಿನ ಮಾಹೆಗಳಲ್ಲಿ ಅದು ಮತ್ತೆ ಎರಡು ಅಂಕಿಗಳನ್ನು ದಾಟಿ ಹೋಗುತ್ತಿದೆ. ಸರ್ಕಾರವು ತಕ್ಷಣವೇ ಸೂಕ್ತ ಕ್ರಮಗಳನ್ನು ಕೈಗೊಳ್ಳದಿದ್ದರೆ ಬೆಲೆ ಏರಿಕೆಯು ಮತ್ತೂ ಹೆಚ್ಚಿನ ದರದಲ್ಲಿ ಬೆಳೆದು ನಮ್ಮ ಉಳಿತಾಯ ಪರಿಮಾಣದಲ್ಲಿ ಇಳಿಕೆಯಾಗುವ ಸಂಭವವಿದೆ ಹಾಗೂ ಈ ಕಾರಣದಿಂದ ನಮ್ಮ ಆರ್ಥಿಕ ಬೆಳವಣಿಗೆ ದರವು ಕಡಿಮೆಯಾಗಬಹುದು.

ಎರಡನೆಯದಾಗಿ ವಿದ್ಯುತ್ ಉತ್ಪಾದನೆಯಲ್ಲಿ ಏರಿಕೆ ಹಾಗೂ ಸಮಾನ ಪೂರೈಕೆಯು ಅತಿ ಮುಖ್ಯವಾದ ಅಂಶ. ಏಕೆಂದರೆ, ನಾವು ಈಗಾಗಲೇ ನೋಡಿದಂತೆ ಕರ್ನಾಟಕದ ಆರ್ಥಿಕತೆಯ ಬೆಳವಣಿಗೆ ದರವು ರಾಷ್ಟ್ರದಕ್ಕಿಂತ ಹಿಂದೆ ಬೀಳಲು ಕಾರಣ ವಿದ್ಯುತ್ ಅಭಾವದಿಂದ ಉಂಟಾದ ಕೈಗಾರಿಕಾ ರಂಗದ ಬೆಳವಣಿಗೆಯ ಇಳಿಕೆಯಾಗಿತ್ತು. ಆದಕಾರಣ ಮುಂದಿನ ದಶಕದಲ್ಲಿ ಕರ್ನಾಟಕದ ಅಭಿವೃದ್ಧಿ ದರವು ಹೆಚ್ಚಾಗಬೇಕಾದರೆ ಕೈಗಾರಿಕಾ ರಂಗದ ಬೆಳವಣಿಗೆ ದರವು ಇಳಿಕೆಯಾಗಬಾರದು. ಹೀಗಾಗದಿದ್ದರೆ ವಿದ್ಯುತ್ ಉತ್ಪಾದನೆಯಲ್ಲಿ ಹೆಚ್ಚಳವಾಗಬೇಕು. ವಿದ್ಯುತ್ ಉತ್ಪಾದನೆಯನ್ನು ಹೆಚ್ಚಿಸುವ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಈ ಕ್ಷೇತ್ರವನ್ನು ಖಾಸಗಿ ಬಂಡವಾಳಕ್ಕೆ ತೆರವು ಮಾಡಿಕೊಡುತ್ತಿರುವುದು ಒಂದು ಸ್ವಾಗತಾರ್ಹ ಸಂಗತಿಯಾಗಿದೆ. ಇದರಿಂದಾಗಿ ವಿದ್ಯುತ್ ಉತ್ಪಾದಿಸುವ ಹೆಚ್ಚಿನ ಸಂಖ್ಯೆಯ ಘಟಕಗಳು ಸ್ಥಾಪಿಸಲಾಗಿ ಅದರ ಉತ್ಪಾದನೆಯನ್ನು ವೃದ್ಧಿಸುವ ಸಾಧ್ಯತೆ ಕಂಡುಬರುತ್ತದೆ.

ಇನ್ನು ಮಳೆ ಬೆಳೆಗಳ ವಿಷಯಕ್ಕೆ ಬಂದರೆ, ಇದರ ಬಗೆ ಹೀಗೆ ಎಂದು ನಿಖರವಾಗಿ ಹೇಳುವಂತಿಲ್ಲ. ಹಿಂದಿನ ಅನುಭವವನ್ನು ಗಮನಿಸಿದ ಪಕ್ಷದಲ್ಲಿ ಬರಗಾಲದ ಪರಿಸ್ಥಿತಿ

೪-೫ ವರ್ಷಗಳಿಗೊಮ್ಮೆ ಆವರ್ತನೆಯಾಗಿರುವುದು ಕಂಡುಬರುತ್ತದೆ. ಇಂತಹ ಬರಗಾಲ ಉಂಟಾದಾಗಲೆಲ್ಲಾ ಕರ್ನಾಟಕದ ಆರ್ಥಿಕ ಬೆಳವಣಿಗೆ ದರವು ಕುಂಠಿತವಾಗಿರುವುದು ಉಂಟು. ಎಂದರೆ ನಮ್ಮ ಆರ್ಥಿಕತೆಯ ಬೆಳವಣಿಗೆಯು ಬರಗಳಿಗೆ ತೀರಾ ಹೆಚ್ಚಿನ ಪ್ರಮಾಣದ ಪ್ರತಿಕ್ರಿಯೆ ತೋರುವಂತಹುದು ಎಂದು ಕಾಣುತ್ತದೆ. ಇದನ್ನು ತಡೆಗಟ್ಟುವ ಉಪಾಯವೇನೆಂದರೆ ನಮ್ಮಲ್ಲಿ ನೀರಾವರಿ ಸೌಲಭ್ಯವನ್ನು ಹೆಚ್ಚಿಸುವುದು. ಮೊದಲೇ ತಿಳಿಸಿದಂತೆ ಬೇರೆ ರಾಜ್ಯಗಳಿಗೆ ಹೋಲಿಸಿದರೆ ನಮ್ಮಲ್ಲಿನ ನೀರಾವರಿ ಸೌಲಭ್ಯದ ಪ್ರಮಾಣ ತೀರಾ ಕಡಿಮೆ. ಒಂದೇನೆಂದರೆ ಅದನ್ನು ಹೆಚ್ಚಿಸುವಂತಹ ಅನುಕೂಲ ನಮ್ಮಲ್ಲಿ ಉಂಟು. ಉದಾಹರಣೆಗೆ ಕೃಷ್ಣಾನದಿಯ ಹೆಚ್ಚಳ ನೀರನ್ನು ಉಪಯೋಗಿಸಿ ಹೈದ್ರಾಬಾದ್-ಕರ್ನಾಟಕ ಕ್ಷೇತ್ರದಲ್ಲಿ ಕೃಷಿ ಪರಿಸ್ಥಿತಿಯನ್ನು ಉತ್ತಮ ಪಡಿಸಬಹುದು. ಕ್ರಿಸ್ತಶಕ ೨೦೦೦ಕ್ಕೆ ಮುಟ್ಟುವ ಮೊದಲೇ ನಮ್ಮ ಪಾಲಿನ ಈ ನದಿ ನೀರನ್ನು ಒಪ್ಪಂದದ ಮೇರೆಗೆ ನಾವು ಉಪಯೋಗಿಸಿಕೊಳ್ಳಬೇಕಾಗಿದೆ. ಇದಕ್ಕೆ ತಗಲುವ ವೆಚ್ಚ ಸುಮಾರು ರೂ.೮೦೦೦ ಕೋಟಿ. ಈ ಗುರಿಯನ್ನು ನಾವು ಸಾಧಿಸುತ್ತೇವೆಯೋ ಇಲ್ಲವೋ ಎಂಬುದು ಇಷ್ಟೊಂದು ಹಣವನ್ನು ಕರ್ನಾಟಕ ಸರ್ಕಾರ ಕ್ರೋಢೀಕರಿಸುತ್ತದೆಯೇ ಅಥವಾ ಇಲ್ಲವೇ ಎಂಬುದರ ಮೇಲೆ ಅವಲಂಬಿಸಿದೆ.

ಒಟ್ಟಿನಲ್ಲಿ ಮುಂದಿನ ದಶಕದಲ್ಲಿನ ನಮ್ಮ ಆರ್ಥಿಕ ಬೆಳವಣಿಗೆಯ ದರವು ಏರುಗತಿಯಾಗಬೇಕಾದರೆ ಕೈಗೊಳ್ಳಬೇಕಾದ ಕಾರ್ಯಕ್ರಮಗಳು: (೧) ತೀವ್ರಗತಿಯಲ್ಲಿ ಏರುತ್ತಿರುವ ಬೆಲೆಗಳನ್ನು ತಡೆಗಟ್ಟುವುದು. (೨) ವಿದ್ಯುತ್ ಉತ್ಪಾದನೆಯಲ್ಲಿ ಪ್ರಗತಿಯನ್ನು ಸಾಧಿಸುವುದು. ಮತ್ತು (೩) ನೀರಾವರಿ ಸೌಲಭ್ಯವನ್ನು ವಿಸ್ತರಿಸುವುದು.

ಇನ್ನು ಮೇಲೆ ಗ್ರಾಮೀಣ ಅಭಿವೃದ್ಧಿ ಯೋಜನೆಗಳಿಗೆ ಹಾಗೂ ಸಾಮಾನ್ಯ ಜನರ ಮೂಲಭೂತ ಆವಶ್ಯಕತೆಗಳನ್ನು ತೃಪ್ತಿಪಡಿಸುವ ಯೋಜನೆಗಳಿಗೆ ಹೆಚ್ಚಿನ ಹಣಕಾಸು ವಿನಿಯೋಗವಾಗುವ ಕಾರಣ ಮುಂದಿನ ದಶಕದ ಆರ್ಥಿಕಾಭಿವೃದ್ಧಿಯು ಗ್ರಾಮೀಣಾಭಿವೃದ್ಧಿ ಹಾಗೂ ಉದ್ಯೋಗ ಸೃಷ್ಟಿ ಪ್ರಧಾನವಾಗುತ್ತದೆಂದು ಹೇಳಬಹುದು. ಏಕೆಂದರೆ. ಈ ವಲಯಗಳು ಬಂಡವಾಳಕ್ಕಿಂತ ಹೆಚ್ಚಾಗಿ ಜನಶಕ್ತಿಯನ್ನು ಉಪಯೋಗಿಸುವಂತಹವು. ಹಾಗೂ ಗ್ರಾಮೀಣ ಪ್ರದೇಶಗಳ ಆರ್ಥಿಕ ಚಟುವಟಿಕೆಗಳನ್ನು ಉತ್ತೇಜಿಸುವಂತಹವು. ಈ ಒಂದು ನಿರೀಕ್ಷೆಯು ಫಲಪ್ರದವಾದ ಪಕ್ಷದಲ್ಲಿ ಅಧಿಕ ದರದಲ್ಲಿ ಬೆಳೆಯುತ್ತಿರುವ ಜನಶಕ್ತಿಗೆ ತಕ್ಕಮಟ್ಟಿಗೆ ಉದ್ಯೋಗಾವಕಾಶಗಳು ದೊರಕುತ್ತವೆ. ಈ ಕಾರಣ ನಿರುದ್ಯೋಗ ಸಮಸ್ಯೆಯು ಸ್ವಲ್ಪ ಸಡಿಲವಾಗುವುದರ ಜೊತೆಗೆ ಬಡತನ ಪ್ರಮಾಣದ ಮಟ್ಟವು ಇಳಿಮುಖಗೊಳ್ಳುವ ಸಾಧ್ಯತೆಯುಂಟು. ಆದರೆ. ಇಲ್ಲಿಯೂ ಸಹ ಬಡತನದ ಪ್ರಮಾಣವು ಕಡಿಮೆ

ಯಾಗುತ್ತದೆಯೇ ಅಥವಾ ಇಲ್ಲವೇ ಎಂಬುದು ಒಂದು ಷರತ್ತಿನ ಮೇಲೆ ಅವಲಂಬಿಸಿದೆ. ಅದೇನೆಂದರೆ, ನೂತನ ಅಭಿವೃದ್ಧಿ ವ್ಯೂಹವನ್ನು ಅನುಸರಿಸಿ ಸೃಷ್ಟಿಸುವ ಉದ್ಯೋಗಾವಕಾಶಗಳು ಉತ್ಪತ್ತಿದಾಯಕವಾಗಿರಬೇಕು ಹಾಗೂ ನಿರಂತರವಾಗಿರಬೇಕು. ಇಲ್ಲಿ ಒತ್ತಿ ಹೇಳಬೇಕಾದ ವಿಷಯವೆಂದರೆ, ಇದಕ್ಕೆ ಮುನ್ನವೂ ಸಹ ಅನೇಕ ಯೋಜನೆಗಳ ಅಡಿಯಲ್ಲಿ ಉದ್ಯೋಗಾವಕಾಶಗಳನ್ನು ಕಲ್ಪಿಸುವ ಪ್ರಯತ್ನಗಳನ್ನು ಮಾಡಲಾಗಿತ್ತು. ಆದರೆ ಇವು ಕೇನ್ಸ್ ಅವರು ಬಣ್ಣಿಸಿದಂತಹ "ಗುಳಿ ತೋಡಿ ಗುಳಿ ಮುಚ್ಚುವ" ಯೋಜನೆಗಳೆನಿಸಿಕೊಂಡಿದ್ದವು. ಇಲ್ಲಿ ಉದ್ಯೋಗಾವಕಾಶಗಳೇನೋ ಸೃಷ್ಟಿಯಾದುದು ನಿಜ. ಹಾಗೂ ಇದರ ಪ್ರಯೋಜನ ಗ್ರಾಮೀಣ ನಿರುದ್ಯೋಗಿಗಳಿಗೆ ಲಭ್ಯವಾದುದೂ ನಿಜ. ಆದರೆ ಇಂತಹ ಯೋಜನೆಗಳಿಂದ ಸತತವಾದ ಹಾಗೂ ಲಾಭದಾಯಕ ಉದ್ಯೋಗಾವಕಾಶಗಳನ್ನು ಸೃಷ್ಟಿಸಿದಂತಾಗಲಿಲ್ಲ. ಒಂದು ವೇಳೆ ಹೀಗೆ ಆಗಬೇಕೆನಿಸಿದರೆ ಇಂತಹ ಯೋಜನೆಗಳ ಕಾರಣ ಬಾಳಿಕೆ ಬರುವಂತಹ ಸಾಮಾಜಿಕ ಆಸ್ತಿ ಅಥವಾ ಬಂಡವಾಳ ಸೃಷ್ಟಿಯಾಗಬೇಕು. ಈ ಬಂಡವಾಳದ ಬಳಕೆಯ ಕಾರ್ಯಗತಿಯಿಂದ ಅಧಿಕ ಪ್ರಮಾಣದಲ್ಲಿ ನಿರುದ್ಯೋಗಿಗಳನ್ನು ಉತ್ಪಾದನಾ ಕಾರ್ಯಗತಿಯಲ್ಲಿ ತೊಡಗಿಸಿ ಕೊಳ್ಳಬೇಕು.ಇಂತಹ ಪರಿಸ್ಥಿತಿಯನ್ನು ಉಂಟುಮಾಡಿದರೆ ಮಾತ್ರ ಉತ್ಪತ್ತಿದಾಯಕ ಉದ್ಯೋಗಾವಕಾಶಗಳು ಸೃಷ್ಟಿಯಾಗಿ ಅಂತಹ ಕ್ಷೇತ್ರಗಳಲ್ಲಿ ತೊಡಗುವ ವ್ಯಕ್ತಿಗಳು ಬಡತನದ ರೇಖೆಯನ್ನು ದಾಟಿಹೋಗುವ ಸಾಧ್ಯತೆ ಉಂಟಾಗುತ್ತದೆ.

ಒಟ್ಟಾರೆ ಹೇಳುವುದಾದರೆ ಇತ್ತೀಚಿಗೆ ಯೋಜಿಸಲಾಗುತ್ತಿರುವ ನೂತನ ವ್ಯೂಹದ ಕಾರಣ ಮುಂದಿನ ದಶಕದಲ್ಲಿ ಕರ್ನಾಟಕದ ಆರ್ಥಿಕತೆಯ ಬೆಳವಣಿಗೆಯಲ್ಲಿ ಏರಿಕೆ ಕಂಡು ಬರುವ ನಿರೀಕ್ಷೆ ಇದೆ. ಆದರೆ ಇದನ್ನು ಎಷ್ಟರಮಟ್ಟಿಗೆ ಸಾಧಿಸಲಾಗುವುದೆಂಬುದು ಬೆಲೆ ಏರಿಕೆಯ ಪರಿಸ್ಥಿತಿಯನ್ನು ನಾವು ಹೇಗೆ ಎದುರಿಸುತ್ತೇವೆ, ವಿದ್ಯುತ್ ಉತ್ಪಾದನೆಯಲ್ಲಿ ಸಾಧಿಸುವ ಪ್ರಗತಿ ಹಾಗೂ ನೀರಾವರಿ ಸೌಲಭ್ಯವನ್ನು ಎಷ್ಟರಮಟ್ಟಿಗೆ ವಿಸ್ತರಿಸಬಹುದು ಎಂಬ ಅಂಶಗಳ ಮೇಲೆ ಅವಲಂಬಿಸಿದೆ. ಹಾಗೆಯೇ, ನೂತನ ವ್ಯೂಹದ ಕಾರಣ ನಿರುದ್ಯೋಗ ಸಮಸ್ಯೆ ಸಡಿಲಗೊಂಡು ಬಡತನದ ಪ್ರಮಾಣವು ಸಹ ಮುಂದಿನ ದಶಕದಲ್ಲಿ ಕಡಿಮೆಯಾಗುವ ನಿರೀಕ್ಷೆಯನ್ನು ಇಟ್ಟುಕೊಳ್ಳಬಹುದು. ಆದರೆ, ಈ ನಿರೀಕ್ಷೆಯು ಎಷ್ಟರಮಟ್ಟಿಗೆ ನಿಜರೂಪ ತಾಳುತ್ತದೆ ಎಂಬುದು ಮುಂದಿನ ವರ್ಷಗಳಲ್ಲಿ ಸೃಷ್ಟಿಯಾಗಲಿರುವ ಉದ್ಯೋಗಾವಕಾಶಗಳು ಉತ್ಪತ್ತಿದಾಯಕವೋ, ಇಲ್ಲವೋ ಎಂಬುದರ ಮೇಲೆ ಅವಲಂಬಿಸುತ್ತದೆ.

---

ಈ ಪ್ರಬಂಧವನ್ನು ತಯಾರಿಸುವಲ್ಲಿ ನನಗೆ ಸಹಾಯ ಮಾಡಿದ ನನ್ನ ಸಹೋದ್ಯೋಗಿಗಳಾದ ಡಾ. ಎಂ. ಮಹದೇವ, ಡಾ. ಎಂ. ವಿವೇಕಾನಂದ ಮತ್ತು ಶ್ರೀ ದೇವೇಂದ್ರಬಾಬು ಅವರಿಗೆ ಕೃತಜ್ಞನಾಗಿದ್ದೇನೆ.

# ಭವಿಷ್ಯದ ಕರ್ನಾಟಕದಲ್ಲಿ ಕೈಗಾರಿಕೆ

ಯು. ರಾಜಾರಾಮ ಮಧ್ಯಸ್ಥ

**೧. ಪೀಠಿಕೆ**

೧.೧ 'ಭಾರತ ಮಾತೆಯ ತನುಜಾತೆ' ಕರ್ನಾಟಕ ರಾಜ್ಯ. ಕರ್ನಾಟಕವು ಭಾರತ ಉಪಖಂಡದ ೨೫ ರಾಜ್ಯಗಳಲ್ಲಿ ಒಂದು. ೧೯೯೧ ರ ಜನಗಣತಿಯ ಪ್ರಕಾರ ಕರ್ನಾಟಕ ರಾಜ್ಯದ ಜನ ಸಂಖ್ಯೆ ೪೪,೯೭೭,೦೦೦ ಇದ್ದು ಭಾರತದ ಜನಸಂಖ್ಯೆ ೮೪೬,೩೦೨, ೦೦೦ಯ ಶೇ. ೫.೩ ರಷ್ಟಿತ್ತು. ೨೦೦೦ ಇಸವಿಯ ಸುಮಾರಿಗೆ ಶೇ. ೧.೪ ವೃದ್ಧಿಯ ಪ್ರಮಾಣದಲ್ಲಿ ಜನಸಂಖ್ಯೆಯು ೫೧,೦೫೩,೦೦೦ ಇದ್ದು ಭಾರತದ ಜನಸಂಖ್ಯೆ ೯೮೨,೫೦೨,೦೦೦ ಯ ಶೇ. ೫. ೨ ಇರಬಹುದು ಎಂದು ಅಂದಾಜಿಸಲಾಗಿದೆ. ಕರ್ನಾಟಕದ ಅಕ್ಷರಸ್ತರ ಸಂಖ್ಯೆ ಶೇ. ೫೬ ಕ್ಕೆ ಏರಿರುವುದು ಬಿಹಾರಿನ ಶೇ. ೩೮.೫ ಹೋಲಿಸಿದರೆ ಹೊಗಳಬಹುದಾದರೂ ನಮ್ಮ ನೆರೆಯ ರಾಜ್ಯ ಕೇರಳ ಶೇ. ೮೯.೮ ಹೊಂದಿರುವುದು ನಾವು ಈ ನಿಟ್ಟಿನಲ್ಲಿ ಇನ್ನೂ ಮುಂದುವರೆಯಬೇಕಾಗಿದೆ.

೧.೨ ಕರ್ನಾಟಕವು ನಮ್ಮ ದೇಶದ ಅತ್ಯಂತ ಕೈಗಾರಿಕೀಕರಣ ಹೊಂದಿರುವ ರಾಜ್ಯಗಳಲ್ಲಿ ಒಂದು. ಉದಾರೀಕರಣ ಮತ್ತು ವಿಶ್ವವ್ಯಾಪಕತೆಯ ಸರಕಾರದ ನೀತಿಯನ್ನು ಪ್ರಕಟಿಸಿದ ಬಳಿಕ ಬೆಂಗಳೂರು, ದಂತಕತೆಯಲ್ಲಿ ಬರುವಂತೆ ಕೇಂದ್ರ ರಂಗಭೂಮಿಯನ್ನು ಸೇರಿದಂತಾಗಿದೆ. ಇಲ್ಲಿಯ ಹವಾಗುಣ, ಮಾರುಕಟ್ಟೆ, (ವ್ಯಕ್ತಿ ಶಕ್ತಿ) ಮಾನವ ಸಂಪನ್ಮೂಲಗಳು ಮತ್ತು ಬೃಹತ್ ನಗರದ ಅನುಕೂಲಗಳ ಲಾಭವನ್ನು ಗಮನಿಸಿ ಭಾವೀ ಉದ್ಯಮಿಗಳೂ, ಬಿಸಿಯಾದ ಬಂಡವಾಳಶಾಹಿಗಳು, ವ್ಯವಹಾರ ಚತುರರು ಮತ್ತು ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿನ ಬಹುರಾಷ್ಟ್ರ ಸಂಸ್ಥೆಗಳು ಸಾಲುಸಾಲಾಗಿ ಬೆಂಗಳೂರಿನತ್ತ ಬರುತ್ತಿದ್ದಾರೆ. ಬೆಂಗಳೂರಲ್ಲದೇ, ಬೆಂಗಳೂರಿನ ಗ್ರಾಮಾಂತರ ಜಿಲ್ಲೆ, ದಕ್ಷಿಣ ಕನ್ನಡ, ಉತ್ತರ ಕನ್ನಡ, ಹುಬ್ಬಳ್ಳಿ, ಧಾರವಾಡ, ಬೆಳಗಾವಿ, ರಾಯಚೂರು, ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಚಿತ್ರದುರ್ಗ ಜಿಲ್ಲೆಗಳೂ ಕೈಗಾರಿಕೀಕರಣ ಹೊಂದುತ್ತಿವೆ.

೧.೩ ವರ್ಷವರ್ಷ ಕರ್ನಾಟಕ ರಾಜ್ಯ ಎಲ್ಲಾ ವಲಯಗಳಲ್ಲೂ ಹೆಚ್ಚಿನ ಪ್ರಗತಿಯನ್ನು

ಸಾಧಿಸಿದೆ. ೧೯೭೦ ರಿಂದ೧೯೮೦ ರ ದಶಕದಲ್ಲಿ ಅದರ ನಿಜ ವೃದ್ಧಿಯ ದರ ಶೇ. ೫.೫ ರಿಂದ ಶೇ. ೬ ಇದ್ದರೆ ೧೯೯೦ ರ ದಶಕದ ಪ್ರಾರಂಭದ ವರ್ಷಗಳಲ್ಲಿ ಭಾರತದ ಅರ್ಥ ವ್ಯವಸ್ಥೆಯಂತೆಯೇ ಪುನರ್ರಚನೆ ಮತ್ತು ದೃಢೀಕರಣದ ಕಾರಣಗಳಿಂದ ಈ ವೃದ್ಧಿಯ ದರದಲ್ಲಿ ಕುಂಠಿತವಾಗಿತ್ತು. ಆದರೆ ೧೯೯೩-೯೪ ರಲ್ಲಿ ವೃದ್ಧಿಯ ದರ ಶೇ. ೩.೫ ಇದ್ದು ೧೯೯೪-೯೫ ರಲ್ಲಿ ಇದರ ನಿಜ ದರವು ಶೇ. ೫ ಕ್ಕೆ ಏರಲಿದೆ ಎಂದು ಅಂದಾಜು ಮಾಡಲಾಗಿದೆ. ಈ ಹೆಚ್ಚಳಕ್ಕೆ ಅಭಿವೃದ್ಧಿಗಾಗಿ ಸರಕಾರವು ತೊಡಗಿಸಿದ ಇತ್ತೀಚೆಗಿನ ವರ್ಷಗಳಲ್ಲಿ ಅಭೂತಪೂರ್ವವಾದ ಬಂಡವಾಳವೇ ಕಾರಣ. ಇದರಿಂದಾಗಿ ಕರ್ನಾಟಕವು ಇಡೀ ಭಾರತ ದೇಶದಲ್ಲೇ ಯೋಜನೆಯ ತಲಾ ಬಂಡವಾಳ (ರೂ. ೭೭೨) ಎಲ್ಲಾ ರಾಜ್ಯಗಳಿಗಿಂತ ಅಧಿಕವಾಗಿದ್ದು ಎನ್ನಲು ಹೆಮ್ಮೆಯೆನಿಸುತ್ತದೆ. ಈ ವರ್ಷ ಈ ಸಂಖ್ಯೆ ಇನ್ನಷ್ಟು ಹೆಚ್ಚುವ ನಿರೀಕ್ಷೆ ಇದೆ.

೧.೪ ಕರ್ನಾಟಕ ರಾಜ್ಯದ ಇನ್ನೂ ಕೆಲವು ಪ್ರಮುಖ ಅಂಕಿ ಅಂಶಗಳನ್ನು ಅನುಬಂಧ ೧ ರಲ್ಲಿ ಕೊಡಲಾಗಿದೆ.

## ೨. ಹೊಸ ಕೈಗಾರಿಕಾ ನೀತಿ

ಕೈಗಾರಿಕಾ ವೃದ್ಧಿಯನ್ನು ಚುರುಕುಗೊಳಿಸಲು ೧೯೯೧ ರ ಜುಲೈ ೨೪ ರಂದು ಹೊಸ ಕೈಗಾರಿಕಾ ನೀತಿಯನ್ನು ಪ್ರಕಟಿಸಲಾಯಿತು. ಉದಾರೀಕರಣ, ಕಟ್ಟುಪಾಡುಗಳನ್ನು ತೊಡೆದು ಹಾಕುವುದು, ತಾಂತ್ರಿಕ ಉನ್ನತಿ, ಬಂಡವಾಳ ಹೂಡಿಕೆಗೆ ಉತ್ತೇಜನ ಅಂತಾರಾಷ್ಟ್ರೀಯ ಸ್ಪರ್ಧಾತ್ಮಕತೆ ಮತ್ತು ವಿಶ್ವವ್ಯಾಪಕತೆ - ಇವು ಈ ಹೊಸ ನೀತಿಯ ಪ್ರಮುಖ ಅಂಶಗಳು. ಇದು ಒಂದೆಡೆ ಉದ್ಯಮಗಳು ಹಾಗೂ ವ್ಯವಸ್ಥಾಪಕರುಗಳಲ್ಲಿ ಗಣನೀಯ ಬದಲಾವಣೆ ತಂದಿದ್ದರೆ, ಇನ್ನೊಂದೆಡೆ ಸರ್ಕಾರಿ ಕಾರ್ಯತಂತ್ರದಲ್ಲೂ ಮಹತ್ವದ ಬದಲಾವಣೆಯನ್ನು ತಂದಿದೆ.

೨.೧ ಕಡ್ಡಾಯ ಪರವಾನಗಿ ಪಡೆಯುವ ವ್ಯವಸ್ಥೆ ಈಗ ಕೇವಲ ೧೬ ಕೈಗಾರಿಕೆಗಳಿಗೆ ಸೀಮಿತವಾಗಿದೆ. ಪರವಾನಗಿ ವಿನಾಯಿತಿ ಪಡೆದ ಕೈಗಾರಿಕೆಗಳು. "ಕೈಗಾರಿಕಾ ಸಂಸ್ಥೆಗಳ ಜ್ಞಾಪನ" (ಐ.ಇ.ಎಮ್) ಮಾತ್ರ ಸಲ್ಲಿಸಬೇಕಾಗುತ್ತದೆ. ಸರ್ಕಾರಿ ವಲಯಕ್ಕೆ ಮೀಸಲಾಗಿದ್ದ ಕೈಗಾರಿಕೆಗಳ ಸಂಖ್ಯೆಯನ್ನು ೮ ರಿಂದ ೬ ಕ್ಕೆ ಇಳಿಸಲಾಗಿದೆ. ೧೯೯೪ ರ ಏಪ್ರಿಲ್ ೨೮ ರಿಂದ ಸದ್ಯದ ಘಟಕಗಳಿಗೆ ಹಂತ ಹಂತದ ಉತ್ಪಾದನಾ ಕಾರ್ಯಕ್ರಮವನ್ನು ರದ್ದು ಪಡಿಸಲಾಗಿದೆ.

೨.೨ ಅಧಿಕ ಆದ್ಯತೆಯುಳ್ಳ ಕೈಗಾರಿಕೆಗಳಿಗೆ ಶೇ.೫೧ರ ವರೆಗೆ ವಿದೇಶಿ ಈಕ್ವಿಟಿ ಬಂಡವಾಳ

ಹೂಡಿಕೆಯನ್ನು ಮುಕ್ತ ಗೊಳಿಸಲಾಗಿದೆ. ವಿದೇಶೀ ಬಂಡವಾಳ ಹೂಡಿಕೆ ಪ್ರಸ್ತಾಪಗಳಿಗೆ ವಿದೇಶೀ ಬಂಡವಾಳ ಹೂಡಿಕೆ ಪ್ರೋತ್ಸಾಹನ ಮಂಡಳಿಯು ಒಂದೆಡೆಯೇ ಒಪ್ಪಿಗೆ ನೀಡುವುದು. ಇದು ಮಾಮೂಲು ಮಾರ್ಗದ ಹೊರಗಿನ ವ್ಯವಸ್ಥೆಯಾಗಿದೆ.

೨.೩ ಶೇ. ೧೦೦ ರಷ್ಟು ರಫ್ತು ಸಂಬಂಧಿ ಘಟಕಗಳಾದರೆ ಇವುಗಳಿಗೆ ಶೇ.೧೦೦ ರಷ್ಟು ನೇರ ವಿದೇಶಿ ಬಂಡವಾಳ ಹೂಡಿಕೆಗೆ ಅವಕಾಶ ನೀಡಲಾಗುತ್ತದೆ. ನಿಗದಿಯಾದ ಕ್ಲುಪ್ತ ಪ್ರಮಾಣಗಳನ್ನು ಪೂರೈಸುವ ಶೇ.೧೦೦ ರಷ್ಟು ರಫ್ತು ಸಂಬಂಧಿ ಘಟಕಗಳಿಗೆ ತಾನಾಗಿಯೇ ಸ್ವೀಕೃತಿ ಸಿಗುತ್ತದೆ.

೨.೪ ಉದ್ಯಮಗಳ ವ್ಯವಸ್ಥಾಪಕರಿಗೆ ನೆರವಾಗಲು ಗಣಕೀಕೃತ ನೆರವು ಕೇಂದ್ರವನ್ನು ಸ್ಥಾಪಿಸಲಾಗಿದೆ. ೫ ರಿಂದ ೧೫ ನಿಮಿಷಗಳೊಳಗೆ ಜ್ಞಾಪನ ಸಲ್ಲಿಸಲು ಅಥವಾ ಸ್ಪಷ್ಟೀಕರಣ ನೀಡಲು ಸಾಧ್ಯವಾಗುತ್ತದೆ.

೨.೫ ೧೯೯೨ ರ ನವೆಂಬರ್‌ನಲ್ಲಿ ರಾಷ್ಟ್ರೀಯ ನವೀಕರಣ ನಿಧಿಯನ್ನು ಕಾರ್ಯ ನಿರ್ವಹಣೆ ಮಾಡಲಾಗಿದೆ. ಪುನರ್ರಚನೆಯಾದಾಗ ತೊಂದರೆಗೊಳಗಾದ ಕಾರ್ಮಿಕರಿಗೆ ಇದು ಸಾಮಾಜಿಕ ಸುರಕ್ಷತೆಯನ್ನೊದಗಿಸುತ್ತದೆ. ೧೯೯೩-೯೪ ರಲ್ಲಿ ೬ ಕೇಂದ್ರಗಳಲ್ಲಿ ತರಬೇತಿ ನೀಡುವ ಕಾರ್ಯ ಪ್ರಾರಂಭವಾಗಿದೆ. ಇನ್ನೂ ಹೆಚ್ಚಿನ ಕೇಂದ್ರಗಳಲ್ಲಿ ಈ ಕಾರ್ಯ ಆದಷ್ಟು ಬೇಗ ಪ್ರಾರಂಭವಾಗುವುದು.

ಕೇಂದ್ರ ಸರಕಾರದ ಹೊಸ ಕೈಗಾರಿಕಾ ನೀತಿಯನ್ನನುಸರಿಸಿ ಕರ್ನಾಟಕ ಸರಕಾರವೂ ೧೯೯೩ ರಲ್ಲಿ ತನ್ನದೇ ಆದ ಹೊಸ ಕೈಗಾರಿಕಾ ನೀತಿಯನ್ನು ರೂಪಿಸಿತು. ಇದನ್ನು ಅನುಷ್ಠಾನಕ್ಕೆ ತಂದ ಪರಿಣಾಮವಾಗಿ ಕರ್ನಾಟಕದಲ್ಲಿ ಪ್ರತಿತಲಾ ಕೈಗಾರಿಕಾ ಬಂಡವಾಳ ಇಡೀ ರಾಷ್ಟ್ರದಲ್ಲಿಯೇ ಅತಿ ಹೆಚ್ಚಿನ ಮಿತಿಯನ್ನು ಪಡೆಯಿತು. ಕರ್ನಾಟಕದಲ್ಲಿ ಇದೀಗ ಆಡಳಿತಕ್ಕೆ ಬಂದ ಜನತಾದಳದ ಸರಕಾರವೂ ಕೇಂದ್ರ ಸರಕಾರದ ಉದಾರ ನೀತಿಯನ್ನೂ ಮತ್ತು ಕೈಗಾರಿಕಾ ನೀತಿಯನ್ನೂ ಅಳವಡಿಸಿಕೊಂಡು ಹೊಸತಾದ ಇನ್ನೊಂದು ಕೈಗಾರಿಕಾ ನೀತಿಯನ್ನು ರೂಪಿಸುವುದರಲ್ಲಿದೆ ಎಂದು ತಿಳಿದು ಬಂದಿದೆ. ಈ ಕಾರಣಗಳಿಂದ ಕರ್ನಾಟಕವು ಬಂಡವಾಳ ಹೂಡಿಕೆದಾರರ ಸ್ವರ್ಗ (investors Paradise) ಎಂದೂ ವಿದೇಶೀ ಬಂಡವಾಳದಾರರ ಬಿಸಿ ರುಚಿ (A hot favourite of foreign investors) ಎಂದೂ ಹೆಸರನ್ನು ಪಡೆದಿದೆಯೆಂದರೆ ಅತಿಶಯೋಕ್ತಿಯಲ್ಲ. ಕರ್ನಾಟಕದ ರಾಜಧಾನಿ ಬೆಂಗಳೂರು ಸಮುದ್ರ ಮಟ್ಟದಿಂದ ೧೦೦೦ ಮೀಟರುಗಳ

ಎತ್ತರದಲ್ಲಿರುವ ಈ ಸುಂದರ ನಗರವು ಕವಿಗಳು ಮತ್ತು ದಾರ್ಶನಿಕರಿಂದ ವಿವಿಧ ರೀತಿಯಲ್ಲಿ ಬಣ್ಣಿಸಲ್ಪಟ್ಟಿರುವುದನ್ನು ಇಲ್ಲಿ ಉಲ್ಲೇಖನೀಯ. ಅವುಗಳೆಂದರೆ:

- ಬೇಸಿಗೆ ಕಾಲದ ವಿಶ್ರಾಂತಿ ಧಾಮ
- ಉದ್ಯಾನನಗರಿ
- ಭಾರತದಲ್ಲಿ ಕ್ಷಿಪ್ರಗತಿಯಲ್ಲಿ ಬೆಳೆಯುತ್ತಿರುವ ನಗರ
- ಭಾರತದ ಸಿಕತ ಪ್ರಸ್ತಭೂಮಿ (India's silicon valley)
- ನಿವೃತ್ತರ ಸ್ವರ್ಗ (Pensioner's Paradise) ಇತ್ಯಾದಿ

**೩. ಕರ್ನಾಟಕದಲ್ಲಿರುವ ಸಂಶೋಧನೆ ಮತ್ತು ವಿಕಾಸ ಸಂಸ್ಥೆಗಳು**

ಈ ಶತಮಾನದ ಪ್ರಾರಂಭದಲ್ಲಿ ಕರ್ನಾಟಕದ ಕೈಗಾರಿಕೀಕರಣದ ಮೊಳಕೆ ಒಡೆದಿತ್ತು. ಭಾರತದ ಕೈಗಾರಿಕೀಕರಣದ ಮೊದಲ ಕೈಗಾರಿಕೋದ್ಯಮಿಗಳಲ್ಲಿ ಒಬ್ಬರಾದ ಸರ್ ಜಮ್ಸೆಟ್ಜೀ ನಸರ್ ವಾನ್ಜೀ ಟಾಟಾ ಅವರು ೧೮೯೮ ರಲ್ಲಿ ವೈಜ್ಞಾನಿಕ ಸಂಶೋಧನೆ ಮತ್ತು ವಿಕಾಸಕ್ಕಾಗಿ ಸಂಸ್ಥೆಯೊಂದನ್ನು ಸ್ಥಾಪಿಸಲು ಮುಂದಾದರು. ಆ ಸಂಸ್ಥೆಯನ್ನು ಪುಣೆಯಲ್ಲಿ ಸ್ಥಾಪಿಸಬೇಕೋ ಅಥವಾ ಬೆಂಗಳೂರಿನಲ್ಲಿ ಸ್ಥಾಪಿಸಬೇಕೋ ಎಂಬ ಜಿಜ್ಞಾಸೆಯಲ್ಲಿದ್ದಾಗ, ಆಗ ಮೈಸೂರು ಸಂಸ್ಥಾನದ ದಿವಾನರಾಗಿದ್ದ ಸರ್ ಶೇಷಾದ್ರಿ ಅಯ್ಯರ್ ಅವರು ಮೈಸೂರು ಮಹಾರಾಜರ ಕೃಪೆಯಿಂದ ೩೭೨ ಎಕರೆಗಳ ವಿಶಾಲವಾದ ಭೂಮಿಯನ್ನು ದಾನವಾಗಿ ನೀಡಿದ್ದರ ಫಲವಾಗಿ ೧೯೦೯ ರಲ್ಲಿ ಭಾರತೀಯ ವಿಜ್ಞಾನ ಸಂಸ್ಥೆ (Indian Institute of Science- ಟಾಟಾ ಇನ್ಸ್ಟಿಟ್ಯೂಟ್)jû :of:j". #;jYÛ;j 'uÛœjÂjr‡j" <jœj‡j;j :j<jrûPß ß<o9Kß;j Ž·œoYR|ß‡jLŽÇ <oÛ]Oth":j".

ಆಮೇಲೆ ಸ್ಥಾಪಿತವಾದ ಸಂಶೋಧನಾ ಮತ್ತು ವಿಕಾಸ ಸಂಸ್ಥೆಗಳಲ್ಲಿ ಈ ಕೆಳಗಿನವುಗಳನ್ನು ಹೆಸರಿಸಬಹುದು:

೨. ಕೇಂದ್ರಿಯ ಉತ್ಪಾದನಾ ತಾಂತ್ರಿಕ ಸಂಸ್ಥೆ
(Central Manufacturing Technology Institute)

೩. ವಿದ್ಯುನ್ಮಾನ ಪರೀಕ್ಷೆ ಮತ್ತು ವಿಕಾಸ ಕೇಂದ್ರ
(Electronics Testing and Development Centre)

೪. ವಿದ್ಯುನ್ಮಾನ ಮತ್ತು ರಾಡಾರ್ ವಿಕಾಸ ಸಂಸ್ಥೆ

(Electronics and Radar Development Establishment)

೫. ಕೇಂದ್ರೀಯ ಖಾದ್ಯ ಪದಾರ್ಥ ಮತ್ತು ತಂತ್ರಜ್ಞಾನ ಅನುಸಂಧಾನ ಸಂಸ್ಥೆ
(Central F ood and Technological Institute)

೬. ರಕ್ಷಣಾ ಖಾದ್ಯವಸ್ತು ಮತ್ತು ಅನುಸಂಧಾನ ಪ್ರಯೋಗ ಶಾಲೆ
(Defence Food Research laboratory)

೭. ಕೇಂದ್ರೀಯ ವಿದ್ಯುತ್ ಅನುಸಂಧಾನ ಸಂಸ್ಥೆ
(Central Power Research Institute)

೮. ಅರಣ್ಯ ಸಂಶೋದನಾ ಪ್ರಯೋಗ ಶಾಲೆ
(Forest Research Laboratory)

೯. ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆ
(Indian Space Research organisation)

೧೦. ರಾಷ್ಟ್ರೀಯ ವೈಮಾನಿಕ ಪ್ರಯೋಗಶಾಲೆ
(National Aeronautical laboratory)

೧೧. ಅನಿಲ ತಿರುಗುಯಂತ್ರ ಸಂಶೋಧನಾ ಸಂಸ್ಥೆ
(Gas Turbine Research Establishment)

೧೨. ಕೃಷಿ ವಿಶ್ವವಿದ್ಯಾಲಯ
(University of Agricultural Sciences)

೧೩. ರಾಷ್ಟ್ರೀಯ ವಿನ್ಯಾಸ ಸಂಸ್ಥೆ
(National Institute of Design)

೧೪. ಭಾರತೀಯ ಪ್ಲೈವುಡ್ ಸಂಶೋಧನಾ ಸಂಸ್ಥೆ
(Indian Plywood Research Institute)

೧೫. ಕೇಂದ್ರೀಯ ರೇಶ್ಮೆ ತಂತ್ರಜ್ಞಾನ ವಿಕಾಸ ಸಂಸ್ಥೆ
(Central Sericultural Technology Development Institute)

೧೬. ಕರ್ನಾಟಕ ರಾಜ್ಯ ರೇಶ್ಮೆ ವಿಕಾಸ ಸಂಸ್ಥೆ
(Karnataka State Sericulture Development Institute )

೧೭. ಭಾರತೀಯ ಪಶುಸಂಗೋಪನಾ ಸಂಶೋಧನಾ ಸಂಸ್ಥೆ
(Indian Veterinary Research Institute)

೧೮. ಭಾರತೀಯ ಹಣ್ಣು ತರಕಾರಿ ಸಂಶೋಧನಾ ಸಂಸ್ಥೆ
(Indian Horticultural Research Institute)

೧೯. ರಾಮನ್ ಸಂಶೋಧನಾ ಸಂಸ್ಥೆ
(Raman Research Institute)

೨೦. ಕೃತಕ ಕುಶಲತೆ ಮತ್ತು ಯಂತ್ರ ಮಾನವಶಾಸ್ತ್ರಗಳ ಕೇಂದ್ರ
(Centre for Artificial intelligence and Robotics)

೨೧. ಮುಂಬರಿದ ಗಣಕಶಾಸ್ತ್ರದ ವಿಕಾಸ ಕೇಂದ್ರ
(Centre for Development of Advanced Computing)

೨೨. ರಕ್ಷಣಾ ಸಂಶೋಧನೆ ಮತ್ತು ವಿಕಾಸ ಸಂಸ್ಥೆ
(Defence Research and Development Organisation)

೨೩. ವೈಮಾನಿಕ ವಿಕಾಸ ಸಂಸ್ಥೆ
(Aeronautical Development Establishment)

೨೪. ಖನನ ಮತ್ತು ಸಂಶೋಧನೆಯ ಪ್ರಾದೇಶಿಕ ಕೇಂದ್ರ (ಅಣು ಶಕ್ತಿ ವಿಭಾಗ)
(Regional Centre for Exploration and Research) (Department of Automic Energy)

೨೫. ನಿಟ್ಟೂರು ಟೆಕ್ನಿಕಲ್ ಟ್ರೈನಿಂಗ್ ಫೌಂಡೇಶನ್

೨೬. ದ ಫೋರ್ಮನ್ ಟ್ರೈನಿಂಗ್ ಇನ್ಸ್ಟಿಟ್ಯೂಟ್

೨೭. ದ ಗವರ್ನಮೆಂಟ್ ಟೂಲ್ ರೂಮ್ ಮತ್ತು ಟ್ರೈನಿಂಗ್ ಸೆಂಟರ್

೨೮. ಇಂಡಸ್ಟ್ರಿಯಲ್ ಟ್ರೈನಿಂಗ್ ಇನ್ಸ್ಟಿಟ್ಯೂಟ್

೨೯. ಭಾರತೀಯ ಆಡಳಿತ ತರಬೇತಿ ಸಂಸ್ಥೆ
(Indian Institute of Management)

೩೦. ಭಾರತೀಯ ರಾಷ್ಟ್ರೀಯ ಕಾನೂನು ಶಾಲಾ ವಿಶ್ವವಿದ್ಯಾಲಯ
(National Law School of Indian University)

೩೧. ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಯ ಸಂಸ್ಥೆ
(Institute of Social and Economic change)

**ಖಾಸಗಿ ಸಂಶೋಧನಾ ಕೇಂದ್ರಗಳು**

೩೨. ಆಸ್ತ್ರಾ ಸಂಶೋಧನಾ ಕೇಂದ್ರ (ಭಾರತ)
Astra Research Centre (India)

೩೩. ವಿಠ್ಠಲ್ ಮಲ್ಯ ಸಂಶೋಧನಾ ಸಂಸ್ಥೆ
(vittal Mallya Research Foundation)

ಈ ಮೇಲ್ಕಂಡ ಸಂಶೋಧನೆ ಮತ್ತು ವಿಕಾಸ ಕೇಂದ್ರಗಳು ಹಾಗೂ ಕರ್ನಾಟಕದಲ್ಲಿರುವ ೫೦ಕ್ಕೂ ಮಿಕ್ಕಿದ ತಾಂತ್ರಿಕ ಕಾಲೇಜುಗಳು ಮತ್ತು ಪಾಲಿಟೆಕ್ನಿಕ್ ಗಳು ಭವಿಷ್ಯ ಕರ್ನಾಟಕದ ಕೈಗಾರಿಕಾ ಕ್ಷೇತ್ರದ ಪ್ರಗತಿಯ ಭದ್ರ ಬುನಾದಿಯನ್ನು ಹಾಕುತ್ತಿವೆ.

**೪. ಕರ್ನಾಟಕದಲ್ಲಿ ಕೈಗಾರಿಕೆಯ ಸಿಂಹಾವಲೋಕನ**

ಪ್ರಾತಃ ಸ್ಮರಣೀಯರೂ, ವಿಶ್ವವಿಖ್ಯಾತ ತಂತ್ರಜ್ಞರೂ, ಹಿರಿಯ ಮುತ್ಸದ್ದಿಗಳೂ ಆದ ಸರ್ ಎಂ.ವಿಶ್ವೇಶ್ವರಯ್ಯನವರು ಕರ್ನಾಟಕದ ಬೆಳವಣಿಗೆಗೆ ನೀಡಿದ ಕೊಡುಗೆ ಸೂರ್ಯಚಂದ್ರರಷ್ಟೇ ಚಿರಸ್ಥಾಯಿ. 'ಕೈಗಾರಿಕೀಕರಣ ಇಲ್ಲವೇ ನಾಶ' (Industrial or Perish) ಅವರ ಘೋಷವಾಕ್ಯ. ೧೯೧೨ ರಲ್ಲಿ ನಡೆದ ಮೈಸೂರು ಆರ್ಥಿಕ ಸಮ್ಮೇಳನ ರಾಜ್ಯದ ಕೈಗಾರಿಕೀಕರಣ ಮತ್ತು ವಾಣಿಜ್ಯ ಬೆಳವಣಿಗೆಗೆ ಕೈಗೊಂಡ ನಿರ್ಣಯ ಮತ್ತೊಂದು ಮೈಲಿಗಲ್ಲು. ದಾರ್ಶನಿಕ ಸರ್. ಎಂ. ವಿ. ಅವರ ದೂರದೃಷ್ಟಿಯ ಫಲವಾಗಿ ೧೯೧೩ ರಲ್ಲಿ ಮೈಸೂರಿನ ಸ್ಟೇಟ್ ಬ್ಯಾಂಕ್‌ನ ಸ್ಥಾಪನೆಯಾಯಿತು. ೧೯೧೬ ರಲ್ಲಿ ಮೈಸೂರು ವಾಣಿಜ್ಯ ಮಹಾಮಂಡಳಿ - ಇಂದಿನ ಕರ್ನಾಟಕ ವಾಣಿಜ್ಯ ಮತ್ತು ಕೈಗಾರಿಕಾ ಮಹಾಮಂಡಳಿಯ ಸ್ಥಾಪನೆಯಾಯಿತು.

ಇದರೊಂದಿಗೆ ತಾಂತ್ರಿಕ ಮಹಾವಿದ್ಯಾಲಯಗಳನ್ನು ಮತ್ತು ಸಂಸ್ಥೆಗಳನ್ನು ಸ್ಥಾಪಿಸಿ ಆಣೆಕಟ್ಟುಗಳನ್ನು ಮತ್ತು ವಿದ್ಯುತ್ ಯೋಜನೆಗಳನ್ನು ನಿರ್ಮಿಸಿ, ಗಣಿ ಉದ್ಯಮ ಮತ್ತು ನೀರಾವರಿ ಯೋಜನೆಗಳಿಗೆ ಪ್ರೋತ್ಸಾಹ ನೀಡಿ ಸರ್. ಎಂ. ವಿ ಅವರು ಕರ್ನಾಟಕದ ಕೈಗಾರಿಕೀಕರಣಕ್ಕೆ ಭದ್ರ ಬುನಾದಿ ಮತ್ತು ಮೂಲಭೂತ ಸೌಕರ್ಯಗಳನ್ನು ಒದಗಿಸಿದರು.

ಭಾರತದ ಸ್ವಾತಂತ್ರ್ಯದ ಬೆಳಕು ದಿಗಂತದಲ್ಲಿ ಮೂಡುತ್ತಿದ್ದ ಕಾಲದಲ್ಲಿ, ಅಂದರೆ ೧೯೪೦ ರಲ್ಲಿಯೇ, ಬೆಂಗಳೂರು ಭಾವಿ ಸ್ವತಂತ್ರ ಭಾರತದ ವೈಜ್ಞಾನಿಕ ಮತ್ತು ತಂತ್ರ ಜ್ಞಾನದ ಕೇಂದ್ರವಾಗಿತ್ತು. ಸರ್. ಎಂ. ವಿ. ಅವರ ದೂರದರ್ಶಿತ್ವದ ಫಲವಾಗಿ ಹಾಗೂ ಇತರ ವ್ಯವಸ್ಥೆಗಳಿಂದ ಆ ಕಾಲದಲ್ಲಿ ಸ್ಥಾಪನೆಯಾದ ಪ್ರಮುಖ ಕೈಗಾರಿಕೆಗಳೆಂದರೆ:

| ಸ್ಥಾಪನಾವರ್ಷ | ಕಾರ್ಖಾನೆ/ಉದ್ಯಮ |
|---|---|
| ೧೯೦೨ | ಶಿವನ ಸಮುದ್ರ ವಿದ್ಯುದುತ್ಪಾದನಾ ಕೇಂದ್ರ |
| ೧೯೦೫ | ಬೆಂಗಳೂರಿಗೆ ವಿದ್ಯುತ್ ಹರಿಕೆ |
| ೧೯೦೬ | ಕಾರ್ಪೊರೇಶನ್ ಬ್ಯಾಂಕ್, ಉಡುಪಿ |
| ೧೯೦೮ | ಮೈಸೂರು ಕ್ರೋ ಟ್ಯಾನರಿ ಲಿ., |
| ೧೯೧೬ - ೧೮ | ಮೈಸೂರು ಗಂಧದೆಣ್ಣೆ ಕಾರ್ಖಾನೆ - ಸಾಬೂನು ಕಾರ್ಖಾನೆ |
| ೧೯೨೨ | ಮಿನರ್ವಾಮಿಲ್ಸ್ ಹಾಗೂ ಕೈಸರ್ ಎ ಹಿಂದ್ ಉಲ್ಲನ್ ಮಿಲ್ಸ್ |
| ೧೯೨೩ | ಭದ್ರಾವತಿಯ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆ (ಈಗಿನ Vishweswaraya Iron & Steel Works) |
| ೧೯೨೫ | ಕೆನರಾ ಇಂಡಸ್ಟ್ರಿಯಲ್ ಬ್ಯಾಂಕಿಂಗ್ ಸಿಂಡಿಕೇಟ್ ಲಿಮಿಟೆಡ್ ಉಡುಪಿ (ಈಗಿನ ಸಿಂಡಿಕೇಟ್ ಬ್ಯಾಂಕ್, ಮಣಿಪಾಲ) |
| ೧೯೩೬ | ಮೈಸೂರು ಕಾಗದ ಕಾರ್ಖಾನೆ, ಭದ್ರಾವತಿ |

೧೯೩೯ ಎರಡನೆಯ ಮಹಾಯುದ್ಧ ಕಾಲ. ಆಗ ೧೯೪೦ರಲ್ಲಿ ಬೆಂಗಳೂರಿನಲ್ಲಿ ವಿಮಾನಗಳ ದುರಸ್ತಿಕಾರ್ಯ ಪ್ರಾರಂಭವಾಗಿ ಹಿಂದೂ ಸ್ಥಾನ್ ವಿಮಾನ ಕಾರ್ಖಾನೆಗೆ ನಾಂದಿಯಾಯಿತು. ಎರಡನೆಯ ಮಹಾಯುದ್ಧದ ನಂತರ ಬೆಂಗಳೂರಿನ ವೈಜ್ಞಾನಿಕ ಮತ್ತು ತಾಂತ್ರಿಕ ಸಾಮರ್ಥ್ಯ ವನ್ನು ಮನಗಂಡು ಭಾರತ ಸರಕಾರವು ಬೃಹತ್ ಕೇಂದ್ರೋದ್ಯಮಗಳನ್ನು ಸ್ಥಾಪಿಸಿತು.

| | |
|---|---|
| ೧೯೪೮ | ಭಾರತೀಯ ದೂರವಾಣಿ ಕಾರ್ಖಾನೆ (Indian Telephone Industries Ltd) |
| ೧೯೫೩ | ಹಿಂದೂಸ್ಥಾನ್ ಯಂತ್ರೋಪಕರಣಗಳ ಕಾರ್ಖಾನೆ (Hindustan Machine Tools Ltd) |
| ೧೯೫೪ | ಭಾರತೀಯ ವಿದ್ಯುನ್ಮಾನಗಳು ನಿಯಮಿತ (Bharat Electronics Ltd) |
| ೧೯೬೪ | ಭಾರತೀಯ ಭೂಮಿ ಚಾಲಕರು ನಿಯಮಿತ (Bharat Earth Movers Ltd) |

ಕರ್ನಾಟಕ ರಾಜ್ಯ ಸರ್ಕಾರ ೧೯೬೫ ರಲ್ಲಿ ನೂತನ ಸರಕಾರಿ ವಿದ್ಯುತ್ ಕಾರ್ಖಾನೆ (New Government Electric Factory) ಯನ್ನು ಪ್ರಾರಂಭಿಸಿತು.

ಈ ಉದ್ಯಮಗಳು ಸ್ವತಂತ್ರ ಭಾರತದ ಮಾತ್ರ ಉದ್ಯಮಗಳಾಗಿ ಕೈಗಾರಿಕೀಕರಣದ

ವಿಸ್ತರಣೆಗೆ ಕೊಂಡಿಯಾಗಿ ಬೆಳೆದವು. ಇದರೊಂದಿಗೆ ಖಾಸಗಿ ಕ್ಷೇತ್ರದಲ್ಲಿನ ಉದ್ಯಮಗಳ ಆಗಮನದಿಂದ ಈ ಬೆಳವಣಿಗೆಯ ವೇಗ ವರ್ಧಿಸಿತು.

ಖಾಸಗಿ ವಲಯದ ಕೈಗಾರಿಕಾ ಸಮೂಹಗಳ ಬಗ್ಗೆ ಹೇಳುವುದಾದರೆ ೧೯೪೬ ರಲ್ಲಿ ಕಿರ್ಲೋಸ್ಕರ್ ಎಲೆಕ್ಟ್ರಿಕ್ ಕಂಪೆನಿಯ ಸ್ಥಾಪನೆಯಾಯಿತು. ಇನ್ನು ಕಿರ್ಲೋಸ್ಕರ್ ಸಮೂಹದ ಮೈಸೂರ್ ಕಿರ್ಲೋಸ್ಕರ್, ಹರಿಹರ ಮತ್ತು ಕಿರ್ಲೋಸ್ಕರ್ ಬಂಧುಗಳು, ವಾಡಿ ಈ ಕಂಪೆನಿಗಳು ಕರ್ನಾಟಕದ ಕೈಗಾರಿಕೀಕರಣಕ್ಕೆ ಸಹಾಯ ಮಾಡಿವೆ. ಇದೇ ಕಾಲದಲ್ಲಿ ಕರ್ನಾಟಕ ಸರಕಾರ ರೆಮ್ಕೋ (Radio and Electronics Manufacturing Company) ಮತ್ತು ಮೈಸೂರು ಪೋರ್ಸಲೀನ್ ಕಾರ್ಖಾನೆಗಳನ್ನು ಸ್ಥಾಪಿಸಿತು. ಕರ್ನಾಟಕ ವಿದ್ಯುದುಪಕರಣಗಳ ಕಾರ್ಖಾನೆ (ಕ.ವಿ.ಕಾ), ಮೈಸೂರು ಇಲೆಕ್ಟ್ರಿಕಲ್ ಇಂಡಸ್ಟ್ರೀಸ್, ಆಮ್ಕೋ ಮುಂತಾದ ಕಾರ್ಖಾನೆಗಳು ಕರ್ನಾಟಕದ ಕೈಗಾರಿಕೀಕರಣಕ್ಕೆ ಕೊಡುಗೆ ನೀಡಿವೆ. ಕರ್ನಾಟಕದ ಕೈಗಾರಿಕೀಕರಣದ ಇನ್ನು ಕೆಲವು ಮೈಲಿಗಲ್ಲುಗಳೆಂದರೆ:

೧೯೫೧ ರಲ್ಲಿ ಮೈಕೋ ಬಾಷ್ ಅಸ್ತಿತ್ವಕ್ಕೆ ಬಂದಿತು.

೧೯೬೦ ರ ದಶಕದಲ್ಲಿ ವಿದ್ಯುತ್ ತಂತ್ರಜ್ಞಾನದ ಮುತ್ಸದ್ದಿ ಬಹುರಾಷ್ಟ್ರ ಸಂಸ್ಥೆ ಏಷಿಯಾ ಬ್ರೌನ್ ಬೊವೆರಿಯ ಆಗಮನ.

೧೯೬೭ ರಲ್ಲಿ ವೀಡಿಯಾ (ಇಂಡಿಯಾ) ಶೇ. ೫೧ ರಷ್ಟು ಜರ್ಮನ್ ಬಂಡವಾಳದೊಂದಿಗೆ ಲೋಹ ಛೇದನ ಉಪಕರಣಗಳ ಮತ್ತು ವಿಶಿಷ್ಟ ಉದ್ದೇಶಿತ ಯಂತ್ರಗಳ ತಯಾರಿಕೆಗಾಗಿ ಸ್ಥಾಪನೆ.

೧೯೮೦ರ ವೇಳೆಗೆ ಬೆಂಗಳೂರು ಭಾರತದ ಸಿಕತ ಪ್ರಸ್ತಭೂಮಿ (Silicon Valley) ಯಾಗಿ ನಿರ್ಮಾಣಗೊಂಡಿತ್ತು. ಗಣಕ ಕಠಿಣವಸ್ತು (Computer hard ware) ಮತ್ತು ಮೃದುವಸ್ತು (Softwar◌) ಗಳೆರಡೂ ಆನಂದ ಭರಿತವಾಗಿ ಹಾಸುಹೊಕ್ಕಾಗಿದ್ದವು.

ಕರ್ನಾಟಕ ಸರಕಾರ, ಅನೇಕ ಅತ್ಯುತ್ತಮ ಕೈಗಾರಿಕಾ ಕ್ಷೇತ್ರಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಸ್ಥಾಪಿಸಿದೆ. ಈ ಕ್ಷೇತ್ರಗಳಲ್ಲಿ ತಾಂತ್ರಿಕ ತಜ್ಞರು ಸಣ್ಣ ಆದರೆ ಸೂಕ್ಷ್ಮ ಗುಣಮಟ್ಟದ ಘಟಕಗಳನ್ನು ಪ್ರಾರಂಭಿಸಿ ಬೃಹತ್ ಉದ್ಯಮಗಳಿಗೆ ಪೂರಕವಾಗಿ ಬೆಳೆಸಿದ್ದಾರೆ. ಈ ಕೈಗಾರಿಕಾ ಘಟಕಗಳು ತಮ್ಮ ಮಾತೃ ಕೈಗಾರಿಕೆಗಳೊಂದಿಗೆ ಆತ್ಮೀಯ ಸಂಪರ್ಕ ಮತ್ತು ಸರಕಾರದ ಸಕ್ರಿಯ ಪ್ರೋತ್ಸಾಹ ಮತ್ತು ಅನುಕೂಲತೆಗಳನ್ನು ಪಡೆದುಕೊಳ್ಳುತ್ತಿವೆ.

ಇಂದು ಕರ್ನಾಟಕದಾದ್ಯಂತ ಆಯಕಟ್ಟಿನ ಸ್ಥಳಗಳಲ್ಲಿ ೧೫೦ ಕೈಗಾರಿಕಾ ಕ್ಷೇತ್ರಗಳಿವೆ. ಇವುಗಳಲ್ಲಿ ಬೆಂಗಳೂರಿನ ಪೀಣ್ಯ, ಮಹದೇವಪುರ ವೈಟ್ ಫೀಲ್ಡ್, ಬೊಮ್ಮನಹಳ್ಳಿ,

ಬೊಮ್ಮಸಂದ್ರ, ಇಲೆಕ್ಟ್ರಾನಿಕ್ ನಗರ, ಕೋರಮಂಗಲ, ಮಂಗಳೂರಿನ ಯಯ್ಯಾಡಿ ಪಡವು, ಶಿವಮೊಗ್ಗದ ಸಾಗರ ರಸ್ತೆಯಲ್ಲಿಯ ಕೈಗಾರಿಕಾ ಕ್ಷೇತ್ರಗಳನ್ನು ಹೆಸರಿಸಬಹುದು.

**೫. ಆಧುನಿಕ ತಂತ್ರಜ್ಞಾನದ ಕಾರ್ಖಾನೆಗಳು**

೫.೧ "ಪಿ ಎಸ್ ಐ ಬುಲ್" ಸಂಸ್ಥೆ ಡಿ ಪಿ ಎಸ್ ೭೦೦೦ ಸರಣಿಯ ಪ್ರಧಾನ ಚೌಕಟ್ಟಿನ ಕಂಪ್ಯೂಟರ್ (Main F rame Computer)ಗಳ ಜೊತೆಗೆ ಮೈಕ್ರೋ, ಮಿನಿ ಮತ್ತು ಪರ್ಸನಲ್ ಕಂಪ್ಯೂಟರ್‌ಗಳನ್ನು ತಯಾರಿಸುತ್ತದೆ.

೫.೨ ವಿಪ್ರೋ-ಇನ್‌ಫೋಟಿಕ್‌ನವರು ಮಿನಿ, ಮೈಕ್ರೋ, ವರ್ಕ್ ಸ್ಟೇಶನ್ ಮತ್ತು ಮೆಯಿನ್ ಫ್ರೇಂ ಕಂಪ್ಯೂಟರ್‌ಗಳಿಂದ ಹಿಡಿದು ಪ್ರಿಂಟರ್‌ಗಳು ಮತ್ತು ಮೃದು ವಸ್ತು ಪರಿಹಾರ (Software Solutions) ಗಳವರೆಗೆ ತನ್ನ ಉತ್ಪಾದನೆಗಳನ್ನು ಬೆಳೆಸಿದೆ.

೫.೩ ಡಿಜಿಟಲ್ ಎಕ್ವಿಪ್ ಮೆಂಟ್ (ಇಂಡಿಯಾ) ೧೯೮೮ ರಿಂದ ಗಣಕ ಕಠಿಣ ವಸ್ತು ಮತ್ತು ಮೃದು ವಸ್ತುಗಳನ್ನು ಅಭಿವೃದ್ಧಿಪಡಿಸಿ ರಫ್ತು ಮಾಡುತ್ತಿದೆ.

ಪ್ರಪಂಚದ ದೊಡ್ಡ ಗಣಕಯಂತ್ರಗಳ ಸಂಸ್ಥೆಗಳಲ್ಲಿ ಒಂದಾದ ಡಿಜಿಟಲ್ ಸಂಸ್ಥೆಯ ಭಾರತೀಯ ಕೇಂದ್ರ ಸ್ಥಾನ ಬೆಂಗಳೂರಿನಲ್ಲಿದೆ. ಈ ಸಂಸ್ಥೆ ತನ್ನ ಪ್ರಭಾವಶಾಲಿ ಕಾರ್ಯಜಾಲದಿಂದ ತಕ್ಷಣ ಪ್ರಪಂಚದಾದ್ಯಂತ ೮೦೦ ನಗರಗಳಲ್ಲಿ ಗಣಕಯಂತ್ರಗಳ ಸಂಪರ್ಕ ಹೊಂದಲು ಸಮರ್ಥವಾಗಿದೆ. ಭಾರತದಲ್ಲಿ ಕಾರ್ಯೋನ್ಮುಖರಾದ ೩ ವರ್ಷಗಳ ಅಲ್ಪಾವಧಿಯಲ್ಲಿಯೇ ಭಾರತ ಸರ್ಕಾರದ 'ನಿರ್ಯಾತದ ನಕ್ಷತ್ರ' (Star Exporter) ಪ್ರಶಸ್ತಿಗಳಿಸಿದೆ.

ಇವುಗಳ ಜೊತೆ ಈ ಕೆಳಗಿನ ಸಂಸ್ಥೆಗಳಾದ:

೫.೪ ಹ್ಯೂಲೆಟ್ ಪ್ಯಾಕಾರ್ಡ್ - ಹಿಂದುಸ್ಥಾನ್ ಕಂಪ್ಯೂಟರ್ ಲಿಮಿಟೆಡ್

೫.೫ ಟೆಕ್ಸಾಸ್ ಇನ್ಸ್ಟ್ರುಮೆಂಟ್ಸ್

೫.೬ ಟಾಟಾ-ಐಬಿಎಮ್

ತಮ್ಮ ತಂತ್ರಜ್ಞಾನದ ಕುಶಲತೆಗೆ ಕರ್ನಾಟಕದ ರಾಜಧಾನಿಯನ್ನೇ ಆಯ್ಕೆ ಮಾಡಿಕೊಂಡಿವೆ. ಈ ಎಲ್ಲಾ ಬೆಳವಣಿಗೆಗಳು ಕರ್ನಾಟಕಕ್ಕೆ ಒಂದು ಬಲಿಷ್ಠ ತಾಂತ್ರಿಕ ತಳಹದಿಯನ್ನು ಒದಗಿಸಿವೆ. ರಾಜ್ಯದ ಶೇಕಡಾ ೨೫ ಕ್ಕೂ ಹೆಚ್ಚು ವರಮಾನ ಕೈಗಾರಿಕಾ ಕ್ಷೇತ್ರದಿಂದ ಬರುತ್ತಿದೆ.

೬. ಮಂಗಳೂರು, ಕೊಂಕಣರೈಲು, ಬೆಂಗಳೂರು, ಮೈಸೂರು ಮುಂತಾದ ರೈಲ್ವೆ

ಸಂಪರ್ಕ, ಉದ್ದೇಶಿತ ವೇಗದ ಭಾರದ ವಾಹನ ವ್ಯವಸ್ಥೆ (Rapid Mass Transport System) ಇವು ಭವಿಷ್ಯದ ಕೈಗಾರಿಕೀಕರಣಕ್ಕೆ ಕೊಡುಗೆ ನೀಡುತ್ತಿವೆ.

೭. ಮಾಹಿತಿ ತಂತ್ರಜ್ಞಾನ (InformationTechnology) ದ ಪಂಡಿತರು ಭಾರತದ ನಿಕತ ಪ್ರಸ್ತಭೂಮಿ (silicon valley) ಯಾದ ಕರ್ನಾಟಕದ ಬೆಂಗಳೂರಿನಲ್ಲಿ ಜಪಾನ್ ಭಾಷೆಯ ತ್ಸುನಾಮಿ (Tsunami) ಎಂದರೆ ಉಬ್ಬರದ ಅಲೆ (Tidal wave)ಯಾಗುತ್ತಿದೆ ಎನ್ನುತ್ತಿದ್ದಾರೆ. ದಕ್ಷಿಣ ಪೂರ್ವ ಏಶಿಯಾ, ಬ್ರಿಟನ್, ಯೂರೋಪ್ ಮತ್ತು ಅಮೇರಿಕಾದ ಸಂಸ್ಥೆಗಳು ಬೆಂಗಳೂರಿನ ಸಮೀಪದ ವಿದ್ಯುನ್ಮಾನ ನಗರದಲ್ಲಿ ತಮ್ಮ ಸ್ಥಾವರಗಳನ್ನು ಸ್ಥಾಪಿಸಲು ಸಾಲುಸಾಲಾಗಿ ಬರುತ್ತಲಿವೆ.

೭.೧. $ ೯.೧೯ ಬಿಲಿಯನ್ ಅಮೆರಿಕಾ ಮೂಲದ ಆ್ಯಪಲ್ ಕಂಪ್ಯೂಟರ್ ಬೆಂಗಳೂರಿನ ರೂ.೩೩೭.೧೮ ಕೋಟಿವ್ಯವಹಾರದ ವಿಪ್ರೋ ಇನ್ಫೋಟೆಕ್‌ನ ಜೊತೆ ೧೯೯೪ ರ ಜನವರಿಯಲ್ಲಿ ಸಂಬಂಧವನ್ನು ಕಲ್ಪಿಸಿ ರೂ.೧೦೦೦ ಕೋಟಿ ಮೌಲ್ಯದ ವೈಯಕ್ತಿಕ ಗಣಕಯಂತ್ರದ ಮಾರುಕಟ್ಟೆಯಲ್ಲಿ ೪.೫ ಪಾಲನ್ನು ಪಡೆದಿರುವುದು.

೭.೨. ದಕ್ಷಿಣ ಕೊರಿಯಾದ ಸ್ಯಾಮ್ಸಂಗ್ ಇಲ್ಲಿಯ ಸಿಂಗಾಪುರ ತಂತ್ರಜ್ಞಾನ ಉದ್ಯಾನ (Singapore Technology Park)ದಲ್ಲಿ ೧೯೯೬-೯೭ ರ ಸುಮಾರಿಗೆ ತನ್ನ ಭಾರತದ ಕಾರ್ಯಕ್ಷೇತ್ರವನ್ನು ಪ್ರಾರಂಭಿಸಲಿದೆ. ಇದು ಮೃದು ವಸ್ತುಗಳನ್ನು ಮತ್ತು ಕಾರ್ಯಕ್ರಮಗಳನ್ನು ಸಿದ್ಧಪಡಿಸಲಿದೆ.

೭.೩ ಟೈವಾನಿನ ಏಸರ್ (U$ ೩..೨ ಬಿಲಿಯನ್) ಸಂಸ್ಥೆಯ ವಿಪ್ರೋ ಇನ್ಫೋಟೆಕ್ ಸಹಯೋಗದೊಂದಿಗೆ ಬಿಡಿ ಭಾಗಗಳು ಮತ್ತು ಪರಿವಸ್ತುಗಳನ್ನು ವಿಪ್ರೋ-ಏಸರ್ ಹೆಸರಿನಲ್ಲಿ ತಯಾರಿಸಲು ಮೇ ತಿಂಗಳ ಮೊದಲ ಭಾಗದಲ್ಲಿ ಒಡಂಬಡಿಸಿದೆ. ಈ ಸಹಯೋಗವು ಮೃದು ವಸ್ತುಗಳ ಅಭಿವೃದ್ಧಿ ಹಾಗೂ ವಿನ್ಯಾಸ ಕೇಂದ್ರವನ್ನು ಸ್ಥಾಪಿಸುವುದರ ಜೊತೆಗೆ ನಿರ್ಯಾತವನ್ನು ಯೋಜಿಸಿದ್ದು ೧೯೯೬ರ ಹೊತ್ತಿಗೆ ಶೇ. ೧೬-೧೭ ಪಾಲು ವೈಯಕ್ತಿಕ ಗಣಕಯಂತ್ರಗಳ ಮಾರುಕಟ್ಟೆಯನ್ನು ದಕ್ಕಿಸಿಕೊಳ್ಳುವ ಯೋಜನೆಯಲ್ಲಿದೆ.

೭.೪ ಅಮೇರಿಕೆಯ $ ೭೭೩ ಮಿಲಿಯದ ಅನಲಾಗ್ ಡಿವೈಸ್ ಶೇ. ೧೦೦ ನಿರ್ಯಾತಾಭಿಮುಖಿ (Export Oriented unit) ಘಟಕವನ್ನು ಸಾಫ್ಟ್ ವೇರ್ ತಂತ್ರಜ್ಞಾನದ ಉದ್ಯಾನದಲ್ಲಿ (Softwae Technology Park) ಸ್ಥಾಪಿಸಲಿದ್ದು ಅದು ಮುಂದಿನ ವರ್ಷ ಗಣಕಯಂತ್ರಗಳ ಮೃದು ವಸ್ತುಗಳನ್ನು ಮತ್ತು

(ಇಂಟಿಗ್ರೇಟೆಡ್ ಸರ್ಕ್ಯೂಟ್) ಅಖಿಲ ಮಂಡಳ ವಿನ್ಯಾಸಗಳನ್ನು ತಯಾರಿಸಲಿದೆ. ದಕ್ಷಿಣದ ಅನಿಲ ಪದಕ (Southern Gas Grid) ವನ್ನು ಕೇಳಿ ಬೇಕಾಗುವ ವಿದ್ಯುಚ್ಛಕ್ತಿಯ ಜನನವನ್ನು ಉಂಟುಮಾಡಲು ಕರ್ನಾಟಕ ಸರಕಾರ ಪ್ರಯತ್ನಿಸುತ್ತಿದೆ.

೭.೫ ಬೃಹತ್ ಸಂಸ್ಥೆಗಳು ಈಗಾಗಲೇ ಬೆಂಗಳೂರಿಗೆ ಬಂದಿರುವುದನ್ನು ಹಿಂದೆಯೇ ಹೇಳಿದೆ. ಇಂಟೆಲ್, ಟೆಕ್ಸಾಸ್ ಇನ್ಸ್ಟ್ರುಮೆಂಟ್ಸ್, ಐಬಿಎಮ್ ಮೋಟೋರೋಲಾ, ಡಿಜಿಟಲ್ ಎಕ್ವಿಪ್ ಮೆಂಟ್ ಕಾರ್ಪೋರೇಶನ್, ಬ್ರಿಟಿಷ್ ಏರೋಸ್ಪೇಸ್, ಸಿಟಿಕಾರ್ಪ್, ವೆರಿಫೋನ್, ಬುಲ್, ಸೀಮೆನ್ಸ್ ಮತ್ತು ಇತರರು ತಮ್ಮ ತಳಹದಿಯನ್ನು, ಒಂದೇ ಅವರ ಉತ್ಪಾದನೆಗಳ ಮಾರುಕಟ್ಟೆಗಾಗಿ ಇಲ್ಲವೇ ಅಭಿವೃದ್ಧಿಪಡಿಸಿ ಕಾರ್ಯಕ್ರಮಗಳನ್ನು ಮೃದುವಸ್ತುಗಳನ್ನು ಸಂಭವಿಸುವುದಕ್ಕಾಗಿ (Soureing), ಊರಿದ್ದಾರೆ. ಅಲ್ಲದೇ ವಿಶೇಷ ಮತ್ತು ಬಹುವ್ಯಾಪ್ತಿ ಹೊಂದಿನ ಪ್ರಪಂಚದ ಬೃಹತ್ ಸಂಸ್ಥೆಗಳಾದ ಜನರಲ್ ಇಲೆಕ್ಟ್ರಿಕ್, ಟ್ಯಾಂಡಮ್, ಎಟಿ ಮತ್ತು ಟಿ, ಹ್ಯುಂಡೈ, ಕಾಂಪೆಕ್, ಸಾರ್ಡ್ ಸ್ಟ್ರಾಮ್ ಮತ್ತು ಬೆಲ್ ನಾರ್ಡನ್ ರೀಸರ್ಚ್ ಈಗಾಗಲೇ ತಮ್ಮ ಮೃದುವಸ್ತುಗಳ ಮೂಲವನ್ನು ಕರ್ನಾಟಕದಲ್ಲಿ ಕಂಡಿದ್ದಾರೆ.

೭.೬ ಡೆನ್ಮಾರ್ಕ್ ದೇಶದ ಎಲ್‌ಇಸಿ ಇಂಟರ್ನಾಷನಲ್ ಇಲ್ಲಿ ಎಲ್‌ಇಸಿ ಇಂಡಿಯಾ ಸಾಫ್ಟ್ ವೇರ್ ಸೆಂಟರನ್ನು ಸ್ಥಾಪಿಸಿದ್ದು ಡೇನಿಷ್ ವ್ಯವಸಾಯ ಉದ್ಯಮಗಳಿಗೆ ಬೇಕಾದ ಮೃದು ವಸ್ತುಗಳನ್ನು ವಿಕಾಸ ಪಡಿಸುತ್ತಿದ್ದಾರೆ.

೭.೭ ಅಮೇರಿಕೆಯ ಸೈಬರ್ ಕ್ಯಾಷ್ ಶೇ. ೧೦೦ ನಿರ್ಯಾತಾಭಿಮುಖ ಉಪಸಂಸ್ಥೆಯೊಂದನ್ನು ಸ್ಥಾಪಿಸಿ ಹಣದ ಸಂದಾಯ ಪದ್ಧತಿಯ ಮೃದುವಸ್ತುಗಳನ್ನು ವಿಶ್ವವ್ಯಾಪಕ ಅಂತರ್ಜಾಲ (Interest)ದ ಮೂಲಕ ನಡೆಸುತ್ತಿರುವುದು 'ವಿಶ್ವವ್ಯಾಪಕ ವಿದ್ಯುನ್ಮಾನ ವಾಣಿಜ್ಯ' (Global Electronic Commerce) ಕ್ಕೆ ನಾಂದಿ ಹಾಕಿರುವುದು ಸ್ತುತ್ಯಾರ್ಹ.

೭.೮ ಶೇ. ೧೭.೭೭ ಮಿಲಿಯ ಸ್ಟರ್ಲಿಂಗ್ ಪೌಂಡ್ ವ್ಯವಹಾರದ ಜೆನಿಸಿಸ್ ಇಂಟಿಗ್ರೇಷನ್ ಸಿಸ್ಟಮ್ಸ್ (Genisys integration Systems)ಯು. ಕೆ ಮತ್ತು ಸಿನಾಪ್ಸಿಸ್, ಅಮೇರಿಕಾ ಇವರು ಸಹಯೋಗದೊಂದಿಗೆ ಮೃದು ವಸ್ತು ವಿಕಾಸಕೇಂದ್ರವನ್ನು ಸ್ಥಾಪಿಸುವ ನಿರೀಕ್ಷೆಯಿದೆ.

ಒಟ್ಟಿನಲ್ಲಿ ಕರ್ನಾಟಕ ರಾಜ್ಯ ಸರಕಾರವು ಅಮೇರಿಕನ್ ಡಾ.೪೫೦ - ೫೦೦

ಮಿಲಿಯದ ಮಾಹಿತಿ ತಂತ್ರಜ್ಞಾನ ಮತ್ತು ದೂರ ಸಂಪರ್ಕ ಬಂಡವಾಳಗಳನ್ನು ಬೆಂಗಳೂರಿನಲ್ಲಿ ಇನ್ನು ಬರುವ ೩-೪ ವರ್ಷಗಳಲ್ಲಿ ಹೂಡುವ ಮತ್ತು ಈ ಅವಧಿಯಲ್ಲಿ ಮೃದುವಸ್ತುಗಳ ನಿರ್ಯಾತವು ಸುಮಾರು ೧೦೦ ಮಿಲಿಯ ಅಮೇರಿಕನ್ ಡಾಲರ್‌ಗಳ ವಿದೇಶೀ ವಿನಿಮಯವನ್ನು ಸಂಪಾದಿಸುವ ನಿರೀಕ್ಷೆಯಲ್ಲಿದೆ.

**೮. ಉಪಸಂಹಾರ**

ಆದರೆ ಬೆಂಗಳೂರಿನ ಈಗಾಗಲೇ ಬಳಲಿದ ಮೂಲಭೂತ ಪರಿಕರ ಸೌಕರ್ಯಗಳು; ವಿದ್ಯುಚ್ಛಕ್ತಿಯ ಮತ್ತು ನೀರಿನ ಅಭಾವ, ದುರಸ್ತಿಯಿಲ್ಲದ ರಸ್ತೆಗಳು ಮತ್ತು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ಇಲ್ಲದಿರುವಿಕೆ ಇವು ವಿದೇಶೀ ಬಂಡವಾಳದ ಆಹ್ವಾನಕ್ಕೆ ಶೀಘ್ರ ಭವಿಷ್ಯದಲ್ಲಿ ಭಯವನ್ನು ತರಬಹುದು. ಇದಕ್ಕಾಗಿ ಬೆಂಗಳೂರಿನ ಸನಿಹದ ತುಮಕೂರು, ಮೈಸೂರು, ಹಾಸನ ಮೊದಲಾದ ಕೇಂದ್ರಗಳಿಗೆ ಉದ್ಯಮಿಗಳನ್ನು ಕರೆದೊಯ್ಯಬೇಕಾದುದು ಅನಿವಾರ್ಯ.

ಉದ್ಯಮ ಕ್ಷೇತ್ರದ ಅಭಿವೃದ್ಧಿಗೆ ಧೃಡಸಂಕಲ್ಪ ಹೊತ್ತ ಸರಕಾರಕ್ಕೆ ಕರ್ನಾಟಕ ರಾಜ್ಯ ದೇಶದ ಕೈಗಾರಿಕಾ ನಕಾಶೆಯಲ್ಲಿ ಉತ್ತುಂಗ ಸ್ಥಾನ ಪಡೆಯುವಂತಾಗಬೇಕಾದರೆ, ಸರಕಾರದ ಜೊತೆ, ಎಲ್ಲರೂ ವಿಶೇಷವಾಗಿ ಕೈಗಾರಿಕಾ ಸಂಘ-ಸಂಸ್ಥೆಗಳು ಸಕ್ರಿಯವಾಗಿ ಪಾಲ್ಗೊಳ್ಳಬೇಕಾದುದು ಮತ್ತು ಸಹಕರಿಸಬೇಕಾದುದು ಅತ್ಯಗತ್ಯ.

ಸರಕಾರದ ಕಾರ್ಯವಿಧಾನವನ್ನು ಪ್ರಾಮಾಣಿಕವಾಗಿ ವಿಶ್ಲೇಷಿಸಿ, ಸೂಕ್ತ ಕಾಲದಲ್ಲಿ ಸೂಕ್ತ ತಿಳುವಳಿಕೆಯನ್ನು ನೀಡುವ ಕಾವಲು-ನಾಯಿ (watc-Dog) ಕೆಲಸದ ಜವಾಬ್ದಾರಿಯನ್ನು ಸಂಘ-ಸಂಸ್ಥೆಗಳು ಸಾರ್ವಜನಿಕರ ಪರವಾಗಿ ನಿರ್ವಹಿಸಿದಾಗ ಸರಕಾರದ ಕೆಲಸ ಸಾಂಗವಾಗಿ ಹಾಗೂ ಸುಲಲಿತವಾಗಿ, ಜನರ ಆಶೋತ್ತರಗಳು ಈಡೇರುವುದು ಸುಲಭವಾಗುವುದು. ಈ ನಿಟ್ಟಿನಲ್ಲಿ ನಾವೆಲ್ಲರೂ ಪ್ರಾಮಾಣಿಕವಾಗಿ ಅಹರ್ನಿಶಿ ಶ್ರಮಿಸೋಣ.

## ಅನುಬಂಧ

### ಕರ್ನಾಟಕದ ಉದ್ಯಮಗಳು : ಕೆಲವು ಅಂಕಿ ಅಂಶಗಳು

| | ೧೯೮೦ | ೧೯೯೦ |
|---|---|---|
| ವ್ಯವಸಾಯಕ್ಕೆ ಸಂಬಂಧಿಸಿದ ಉದ್ಯಮಗಳು | ೧೪೯೦೦೦ | ೨೨೯೦೦೦ |
| ಇತರ ಉದ್ಯಮಗಳು | ೧೩೩೪೦೦೦ | ೧೪೭೫೦೦೦ |
| ಕೆಲಸಗಾರರು | ೩.೭೫೯೦೦೦ | ೫೦೦೪೦೦೦ |

## ನೋಂದಣಿಗೊಂಡ ಕೆಲಸಮಾಡುತ್ತಿರುವ ಉದ್ಯಮಗಳು (ಜೂನ್ ೧೯೯೧)

| | ಕರ್ನಾಟಕ | ಅಖಿಲಭಾರತ | ಶೇ. |
|---|---|---|---|
| ಉತ್ಪಾದನೆಗೆ ಸಂಬಂಧಿಸಿದವು | ೯೬೭೮ | ೧೯೮೯೨೯ | ೪.೮೨ |
| ವಿದ್ಯುಚ್ಛಕ್ತಿ | ೮೦ | ೧೪೨೭ | ೫.೬ |
| ಅನಿಲ ಮತ್ತು ಉಗಿ | ೭ | ೧೬೯ | ೪.೧ |
| ನೀರು ಸರಬರಾಜು | ೧೩ | ೮೬೦ | ೧.೫ |
| ಇತರೆ | ೬೮ | ೨೧೬೧ | ೩.೧ |
| ಒಟ್ಟು | ೯೮೫೬ | ೨೦೪೦೨೬ | ೪.೮೩ |

| | | | |
|---|---|---|---|
| ಆಹಾರ ಪದಾರ್ಥಗಳ ಉದ್ಯಮಗಳು | ೧೬೭೭ | ೫೭೨೬೯ | ೨.೯ |
| ಪೇಯ ಮತ್ತು ತಂಬಾಕು ಉದ್ಯಮಗಳು | ೧೭೩ | ೧೬೪೪ | ೧೦.೫ |
| ಜವಳಿ | ೩೪೬೦ | ೨೩೭೦೨ | ೧೪.೬ |
| ಮರ ಮತ್ತು ಮರದ ಉತ್ಪಾದನೆಗಳು | ೧೭ | ೨೨೨೩೪ | ೦.೦೮ |
| ಗೋಣಿ ಜವಳಿ | ೨ | ೫೦೨ | ೦.೪ |
| ಕಾಗದ ಮತ್ತು ಮುದ್ರಣ ವಸ್ತುಗಳು | ೧೪೮೦ | ೯೬೭೯ | ೧೫.೩ |
| ಚರ್ಮ ಮತ್ತು ಗರಿ ವಸ್ತುಗಳು | ೨೨ | ೧೫೬೮ | ೧.೪ |
| ರಬ್ಬರ್, ಪ್ಲಾಸ್ಟಿಕ್, ಕಲ್ಲೆಣ್ಣೆಯ ವಸ್ತುಗಳು | ೨೦೧ | ೭೮೬೬ | ೨.೬ |
| ರಾಸಾಯನಿಕ ಪದಾರ್ಥಗಳು | ೩೮೧ | ೯೬೭೫ | ೩.೯ |
| ಅಲೋಹ ಖನಿಜ ಉದ್ಯಮಗಳು | ೪೧೭ | ೧೩೪೬೦ | ೩.೧ |
| ಮೂಲ ಲೋಹಗಳು ಮತ್ತು ಮಿಶ್ರಧಾತು ಉದ್ಯಮಗಳು | ೩೯೯ | ೮೫೬೭ | ೪.೭ |
| ಲೋಹವಸ್ತುಗಳು | ೩೨೧ | ೧೨೮೫೫ | ೨.೫ |
| ವಿದ್ಯುಚ್ಛಕ್ತಿ ಮತ್ತಿತರ ಯಂತ್ರಗಳು | ೭೦೦ | ೧೬೮೭೦ | ೬.೧ |
| ಸಾಗಾಣಿಕೆಯ ಯಂತ್ರಗಳು | ೭೫ | ೩೪೩೭ | ೨.೨ |
| ಇತರ ಉದ್ಯಮಗಳು | ೨೪೧ | ೭೧೭೭ | ೩.೪ |
| ರಿಪೇರಿ ಸೇವೆಗಳು | ೨೯೦ | ೭೩೨೧ | ೩.೯ |
| ಒಟ್ಟು | ೯೮೫೬ | ೨೦೪೦೨೬ | ೪.೮೩ |

### ಉತ್ಪಾದನೆಯ ಉದ್ಯಮಗಳ ವಲಯದ ವಹಿವಾಟುಗಳ ಮೌಲ್ಯ (ಕೋಟಿ ರೂ.ಗಳಲ್ಲಿ)

| | ೧೯೭೦-೭೧ | ೧೯೭೫-೭೬ | ೧೯೮೦-೮೧ | ೧೯೮೫-೮೬ | ೧೯೮೯-೯೦ |
|---|---|---|---|---|---|
| ಕರ್ನಾಟಕ | ೫೬೫ | ೧೨೩೩ | ೨೫೯೨ | ೪೭೮೮ | ೧೦೧೦೪ |
| ಭಾರತ | ೧೩೭೬೫ | ೨೯೮೬೬ | ೬೧೦೮೬ | ೧೨೦೧೫೫ | ೨೩೦೬೫೯ |
| ಭಾರತದಲ್ಲಿ ಕರ್ನಾಟಕದ ಪಾಲು | ೪.೧ | ೪.೧ | ೪.೨ | ೪.೦ | ೪.೪ |

### ವಿದ್ಯುನ್ಮಾನಗಳು (Electronics) (ಕೋಟಿ ರೂ.ಗಳಲ್ಲಿ)

| | ೧೯೭೦ | ೧೯೮೦ | ೧೯೮೫ | ೧೯೮೯ | ೧೯೯೦ |
|---|---|---|---|---|---|
| ಕರ್ನಾಟಕ | ೭೦ | ೧೯೪ | ೪೭೫ | ೧೩೭೦ | ೧೭೬೦ |
| ಭಾರತ | ೧೩೯ | ೫೨೯ | ೨೬೬೦ | ೨೩೦೮ | ೯೨೦೦ |
| ಭಾರತದಲ್ಲಿ ಕರ್ನಾಟಕದ ಪಾಲು | ೫೦.೪ | ೩೬.೭ | ೧೭.೮೬ | ೫೯.೪ | ೧೯.೧ |

### ಸಣ್ಣ ಪ್ರಮಾಣದ ಕೈಗಾರಿಕೆಗಳು (SIDOನಲ್ಲಿ ನೋಂದಣಿಗೊಂಡಂತೆ)

| | ೧೯೭೧ | ೧೯೮೧ | ೧೯೮೫ | ೧೯೯೨ |
|---|---|---|---|---|
| ಕರ್ನಾಟಕ | ೧೧೩೬೪ | ೧೯೭೮೧ | ೪೨೩೫೯ | ೮೮೫೧೩ |
| ಭಾರತ | ೨೩೯೧೨೮ | ೩೨೩೪೮೫ | ೮೪೯೩೭೪ | ೧೬೩೭೮೧೨ |
| ಭಾರತದಲ್ಲಿ ಕರ್ನಾಟಕದ ಪಾಲು | ೪.೮ | ೩.೮ | ೫.೦ | ೫.೪ |

### ಖಾದಿ ಮತ್ತು ಗ್ರಾಮೋದ್ಯೋಗಗಳು (ಲಕ್ಷ ರೂ.ಗಳಲ್ಲಿ)

| | ಕರ್ನಾಟಕ | | ಭಾರತ | |
|---|---|---|---|---|
| | ೧೯೮೨-೮೩ | ೧೯೯೨-೯೩ | ೧೯೮೨-೮೩ | ೧೯೯೨-೯೩ |
| ಉತ್ಪಾದನೆ | ೪೯೯೭ | ೧೪೫೭೨ | ೭೬೦೩೬ | ೨೮೭೬೯೩ |
| ವಿಕ್ರಯ | ೪೩೯೭ | ೧೪೯೯೨ | ೭೫೩೬೦ | ೩೧೯೭೨೬ |
| ಉದ್ಯೋಗಾವಕಾಶ | ೧.೨೦.೦೦೦ | ೧.೭೦.೦೦೦ | ೭೪.೩೦.೦೦೦ | ೩೨.೫೦.೦೦೦ |
| ಸಂಪಾದನೆ | ೯೬೦ | ೩೭೮೧ | ೨೧೯೬೦ | ೧೦೧೩೬೩ |

# ಕರ್ನಾಟಕ ಸಾಂಸ್ಕೃತಿಕ ಸ್ವರೂಪ

ಕೆ. ಎಚ್. ಶ್ರೀನಿವಾಸ್

ಕನ್ನಡಿಗರ ಜ್ಞಾನಕೇಂದ್ರವಾಗಿ ಬೆಳೆಯಬೇಕೆಂಬ ಕನಸು ಹೊತ್ತು ಬಗೆಬಗೆಯ ಕಾರ್ಯಯೋಜನೆಗಳನ್ನು ಹಮ್ಮಿ ಹೆಮ್ಮೆಯಿಂದ ಹಂಪಿಯಲ್ಲಿ ತಲೆ ಎತ್ತಿ ನಿಂತಿರುವ ಕನ್ನಡ ವಿಶ್ವವಿದ್ಯಾಲಯದ ವಾರ್ಷಿಕ ನುಡಿಹಬ್ಬದ ಈ ಮಹಾಧಿವೇಶನದಲ್ಲಿ ಕರ್ನಾಟಕ ಸಾಂಸ್ಕೃತಿಕ ಸ್ವರೂಪ ಎಂಬ ವಿಷಯದ ಬಗ್ಗೆ ಒಂದು ಪ್ರಬಂಧ ಮಂಡಿಸುವ ಅಭಿಮಾನದ ಗೌರವದ ಅವಕಾಶಕ್ಕಾಗಿ ಕೃತಜ್ಞನಾಗಿದ್ದೇನೆ. ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿ, ಅದನ್ನು ಹಂಚುವ ಸಮರ್ಥ ವ್ಯವಸ್ಥೆಯಾಗಿ, ಕರ್ನಾಟಕದ ಸಾಂಸ್ಕೃತಿಕ ಪುನರುತ್ಥಾನದ ಸಂಕೇತವಾಗಿ ರೂಪುಗೊಳ್ಳುತ್ತಿರುವ ಈ ವಿಶ್ವವಿದ್ಯಾಲಯದ ವೇದಿಕೆಯಲ್ಲಿ ವಿಶೇಷವಾಗಿ ಹೊಸದೇನನ್ನೂ ಹೇಳುವ ಸಾಮರ್ಥ್ಯ ನನ್ನದಲ್ಲವೆಂದು ಮೊದಲಿಗೆ ವಿನಯಪೂರ್ವಕವಾಗಿ ವಿನಂತಿಸಬಯಸುತ್ತೇನೆ. ನಮ್ಮ ಪರಂಪರಾಗತ ತಿಳುವಳಿಕೆಗಳು ಹಾಗೂ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಒಂದಕ್ಕೊಂದು ಸ್ಪಂದಿಸಿ, ಸಂದಿಸಿ ಒಂದರೊಳಗೊಂದು ಸಂಗಮಿಸಿ ಹುಟ್ಟಿಸಿದ ಸಮನ್ವಯದ ಬೆಳಕಿನಲ್ಲಿ ಹೊಸ ಬಗೆಯ ಶಾಸ್ತ್ರ ವಿಧಾನಗಳನ್ನೂ, ಶಾಸ್ತ್ರ-ಕಲೆ ಅಭಿಜಾತ-ಜಾನಪದ ಮಾರ್ಗ-ದೇಸಿ ಸ್ವಕೀಯ-ಪರಕೀಯ ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆಯ ದ್ವಂದ್ವಗಳ ಸಂಘರ್ಷ ಹಾಗೂ ಸಾಮರಸ್ಯಗಳಲ್ಲಿ ಮೂಡಿ ಬರುವ ತಿಳುವಳಿಕೆಯ ಶೃತಿ ಹಿಡಿದು ಅದಕ್ಕೆ ತಕ್ಕ ಅಭಿವ್ಯಕ್ತಿಯನ್ನೂ ಸಂಶೋಧಿಸುತ್ತಾ ಬಹುಮುಖವಾಗಿ ಮುನ್ನಡೆದಿರುವ ಈ ವಿಶ್ವವಿದ್ಯಾಲಯ ಈಗಾಗಲೇ ನಮ್ಮ ಭವಿಷ್ಯದ ಸಾಂಸ್ಕೃತಿಕ ಸ್ವರೂಪಕ್ಕೆ ದೊಡ್ಡ ದಾರಿದೀಪವಾಗಿದೆ. ಈ ಸಾಧನೆಗಾಗಿ ಕುಲಪತಿ ಡಾ. ಚಂದ್ರಶೇಖರ ಕಂಬಾರರನ್ನು ಅಭಿನಂದಿಸುತ್ತೇನೆ. ಎಣ್ಣೆ ಬತ್ತಿಗಳ ಕೊರತೆ ಬರದಂತೆ ಇದು ನಂದಾದೀಪವಾಗಿ ಬೆಳಗಲಿ ಎಂದು ಈ ಶುಭಸಂದರ್ಭದಲ್ಲಿ ಹಾರೈಸುತ್ತೇನೆ.

ಅಂತಿಮವಾಗಿ ಎಲ್ಲ ಬೌದ್ಧಿಕ, ಆಧ್ಯಾತ್ಮಿಕ ಹಾಗೂ ಪ್ರಾಪಂಚಿಕ ವಿದ್ಯಮಾನಗಳೆಲ್ಲವನ್ನೂ ಒಳಗೊಂಡಂತೆ ಸಮಗ್ರ ಜೀವನ ರೀತಿಯನ್ನು ಸಂಕೇತಿಸಬಲ್ಲ ವ್ಯಾಪಕ ಅರ್ಥ ಆಯಾಮಗಳು ಎರಕಗೊಂಡಿರುವ ಶಬ್ದ 'ಸಂಸ್ಕೃತಿ'. ಇದು ಇಡೀ

ಜನಸಮುದಾಯಕ್ಕೂ, ವೈಯಕ್ತಿಕ ಜೀವನಕ್ಕೂ, ಪೂರ್ಣತೆಯ ಹಂಬಲಕ್ಕೂ ಜೀವನದ ಒಟ್ಟು ವಾಸ್ತವಕ್ಕೂ ಏಕಕಾಲಕ್ಕೆ ಅನ್ವಯವಾಗುವ ಶಬ್ದ. ವಿಶಾಲವಾದ ಹಾಗೂ ನಿಜವಾದ ಅರ್ಥದಲ್ಲಿ, ಜನರ ನಂಬಿಕೆಗಳಲ್ಲಿ, ನಡಾವಳಿಗಳಲ್ಲಿ ದೈನಿಕಗಳಲ್ಲಿ ವ್ಯಕ್ತವಾಗಿಯೂ ಇಂಗಿತವಾಗಿಯೂ ಕಾಣುವುದೆಲ್ಲಾ ಸಂಸ್ಕೃತಿ.

ಹಲವು ಸಂಸ್ಕೃತಿಗಳ ಸಂಘರ್ಷಕ್ಕೆ, ಸಂಗಮಕ್ಕೆ ಸಾಮರಸ್ಯ ಸಮನ್ವಯಕ್ಕೆ ಹಾಗೂ ಸಹಬಾಳ್ವೆಗೆ ಆಶ್ರಯ ನೀಡಿರುವ ಭಾರತಕ್ಕೆ ಅದರದ್ದೇ ಆದ ವಿಶಿಷ್ಟ ಸಂಸ್ಕೃತಿಯಿದೆ. ಅದು ಭಾರತದ ಸಂಸ್ಕೃತಿ. ಈ ಮೂಲ ಸಂಸ್ಕೃತಿಯಿಂದ ಕುಡಿಯೊಡೆದು ಅರಳಿರುವ ಅನೇಕ ರಾಜ್ಯ ಹಾಗೂ ಭಾಷಾ ಸಂಸ್ಕೃತಿಗಳಲ್ಲಿ ಕರ್ನಾಟಕ ಸಂಸ್ಕೃತಿಯೂ ಒಂದೆಂಬ ಪ್ರಜ್ಞೆ ನಮ್ಮ ಚಿಂತನೆಯ ಸ್ವಾಸ್ಥ್ಯಕ್ಕೆ ಅತ್ಯಗತ್ಯ. ವ್ಯಾಪಕವೂ ಸಂಕೀರ್ಣವೂ ಆಗಿರುವ ಭಾರತದ ಸಂಸ್ಕೃತಿಯಿಂದ ನಮ್ಮನ್ನು ಸಂಪೂರ್ಣ ಬೇರ್ಪಡಿಸಿಕೊಳ್ಳುವ ಪ್ರಯತ್ನ ಅಸಾಧ್ಯ ಹಾಗೂ ಅಸಾದು. ಇದು ಕರ್ನಾಟಕ ಸಂಸ್ಕೃತಿಯ ಅಸ್ತಿತ್ವವನ್ನಾಗಲೀ ವೈಶಿಷ್ಟ್ಯವನ್ನಾಗಲೀ ಅಲ್ಲಗಳೆಯುವ ಮಾತಲ್ಲ. ಬದಲು ಮೂಲಭೂತ ಜೀವನ ಪೋಷಕ ಅಂಶಗಳಿಂದ ದೂರವಾಗಿ ಒಂದು ರೋಗಗ್ರಸ್ತ ಜನಸಮುದಾಯವಾಗಿ ಬಿಡದಂತೆ ನಮ್ಮನ್ನು ನಾವು ಕಾಯ್ದುಕೊಳ್ಳಲು ಬೇಕಾದ ಎಚ್ಚರ. ಭಾರತದ ಮಹಾನ್ ಸಂಸ್ಕೃತಿ ಏಕಶಿಲೆಯಾಗಿ ಉಳಿಯದೆ ಬಹುರೂಪಿಯಾಗಿ ಅರಳಿರುವುದರ ಹಿಂದೆ ಯಾವುದೋ ಜೈವಿಕ ಕಾರಣ ಹಾಗೂ ಪ್ರಕ್ರಿಯೆ ಇದ್ದಿರಲೇಬೇಕು. ನಾವು ಕನ್ನಡ ಮಾತನಾಡುವುದಕ್ಕೂ, ಇನ್ನಾರೋ ತಮಿಳು, ತೆಲುಗು, ಮಲೆಯಾಳ ಮಾತಾಡುವ ಬೇರೆಯೇ ಜನಸಮುದಾಯವಾಗಿ ಬೆಳೆದಿರುವುದಕ್ಕೂ ಯಾವುದೋ ಮೂಲಭೂತವೂ ವಿಶಿಷ್ಟವೂ ಆದ ಜೈವಿಕ ಒತ್ತಡಗಳು ಕಾರಣ. ನಮ್ಮ ನಮ್ಮ ಭಾಷೆಗಳು, ಸಾಂಸ್ಕೃತಿಕ ವೈಶಿಷ್ಟ್ಯಗಳು, ಗುಣ-ದೋಷಗಳು, ಸಾಮರ್ಥ್ಯ ದೌರ್ಬಲ್ಯಗಳು ಇವೆಲ್ಲ ಆ ಪ್ರಕ್ರಿಯೆಯಿಂದಲೇ ನಮಗೆ ಪ್ರಾಪ್ತಿಯಾಗಿವೆ. ಅವೆಲ್ಲವೂ ನಮ್ಮ ಅಸ್ತಿತ್ವದ ಅವಿಭಾಜ್ಯ ಅಂಶಗಳು. ನಾವು ತಮಿಳರಂತೆಯೋ, ಮಲೆಯಾಳದವರಂತೆಯೋ ಆಗಿ ಬಿಡಬೇಕೆಂಬುದು ಹಾಗೂ ಅವರುಗಳು ಕನ್ನಡಿಗರಾಗಿಬಿಡಬೇಕೆಂದು, ಎಲ್ಲ ವಿಷಯಗಳಲ್ಲೂ ಆಗ್ರಹಿಸುವುದು ಸರಿಯಲ್ಲ. ಇದರರ್ಥ ಹೋಲಿಕೆ ವ್ಯತ್ಯಾಸಗಳೇ ಬೇಡವೆಂದಲ್ಲ. ನಮ್ಮ ದೌರ್ಬಲ್ಯಗಳನ್ನೆಲ್ಲಾ ಸದ್ಗುಣಗಳೆಂದು ವೈಭವೀಕರಿಸುವುದು ಎಷ್ಟು ತಪ್ಪೋ ಅಷ್ಟೇ ನಮ್ಮ ಸದ್ಗುಣಗಳನ್ನೆಲ್ಲಾ ದೌರ್ಬಲ್ಯಗಳೆಂದು ತಿಳಿದು ಇನ್ನೊಬ್ಬರನ್ನು ಅನುಕರಿಸ ಹೊರಡುವುದು ಅದಕ್ಕಿಂತ ಹೆಚ್ಚಿನ ತಪ್ಪು. ಅಪಾಯಕಾರಿ ಆತ್ಮಘಾತುಕ ಎಂಬುದಷ್ಟೆ ನನ್ನ ಮಾತಿನ ತಾತ್ಪರ್ಯ. ಸಹಿಷ್ಣುತೆ ಭಾರತದ ಸಂಸ್ಕೃತಿಯ ವಿಶಿಷ್ಟವೂ ಆದ ಒಂದು ಬಹುಮುಖಿ ಅಂಶ. ಭಾರತದ ಇನ್ನಾವುದೇ ರಾಜ್ಯದಲ್ಲಿ

ಕಾಣದ ಪ್ರಮಾಣದಲ್ಲಿ ನಾವು ಈ ಅಂಶವನ್ನು ಕರ್ನಾಟಕದಲ್ಲಿ ಕಾಣಬಹುದು. ಇದು ಕರ್ನಾಟಕ ಸಂಸ್ಕೃತಿಯ ಬಹುಮುಖ್ಯ ಅಂಶ. ಇದನ್ನು ಕೇವಲ ದೌರ್ಬಲ್ಯವೆಂದೇ ತಿಳಿದು ಬೇರೆ ಭಾಷೆ ಹಾಗೂ ಜನಸಮುದಾಯಗಳ ಬಗ್ಗೆ ಅಸಹನೆ ಹಾಗೂ ದ್ವೇಷವನ್ನು ಪ್ರಚೋದಿಸುವುದರಿಂದ ನಾವು ನಮ್ಮತನವನ್ನು ಕಳೆದುಕೊಳ್ಳಬಹುದಷ್ಟೆ ಹೊರತು ದಿಢೀರನೆ ಇನ್ನೇನೋ ಆಗಿಬಿಡುವುದು ಸಾಧ್ಯವಿಲ್ಲ. ಸಹಿಷ್ಣುತೆಯ ಬಗ್ಗೆ ಹೆಮ್ಮೆ ಪಟ್ಟುಕೊಳ್ಳದಿದ್ದರೆ ಅಭ್ಯಂತರವಿಲ್ಲ. ಆದರೆ ಅದೊಂದು ಕೀಳರಿಮೆಯಾಗಬೇಕಿಲ್ಲ. ಸಮಗ್ರ ಅರ್ಥದಲ್ಲಿ 'ನಮ್ಮತನ'ವನ್ನು ಉಳಿಸಿಕೊಂಡೇ ಬೆಳೆಯುವ ಛಲ ನಮ್ಮದಾಗಬೇಕು.

ಕರ್ನಾಟಕದ ಸಾಂಸ್ಕೃತಿಕ ಸ್ವರೂಪದ ಬಗ್ಗೆ ಚಿಂತಿಸುವಾಗ ಸಹಜವಾಗಿಯೇ ನಮ್ಮ ಕೇಂದ್ರ ಲಕ್ಷ್ಯ ಕನ್ನಡ ಭಾಷೆಯತ್ತ ತಿರುಗುತ್ತದೆ. ಕನ್ನಡಕ್ಕೆ ಆಡಳಿತ ಭಾಷೆಯ ಪಟ್ಟವನ್ನೂ ಅಗ್ರಮಾನ್ಯ ಸ್ಥಾನವನ್ನೂ ಘೋಷಿಸಿದ್ದೇವೆ, ನಿಜ. ಆದರೆ ಅನುಷ್ಠಾನದಲ್ಲಿ ನಮ್ಮಷ್ಟು ಹಿಂದೆ ಬಿದ್ದಿರುವ ರಾಜ್ಯ ಬೇರೆ ಇಲ್ಲ. ಈ ಉದ್ದೇಶಕ್ಕಾಗಿಯೇ ಸ್ಥಾಪನೆಗೊಂಡ ಕನ್ನಡ ಕಾವಲು ಸಮಿತಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಇತ್ಯಾದಿಗಳಿಂದಲೂ ವಿಶೇಷ ಪ್ರಗತಿ ಏನನ್ನೂ ಈವರೆಗೆ ಸಾಧಿಸುವುದು ಸಾಧ್ಯವಾಗಿಲ್ಲ. ಕನ್ನಡವನ್ನು ಆಡಳಿತಭಾಷೆಯಾಗಿ ಜಾರಿಗೊಳಿಸುವಲ್ಲಿ ಸಚಿವಾಲಯದ ಮಟ್ಟದ ಐ.ಎ.ಎಸ್ ಅಧಿಕಾರಿಗಳದೇ ಪ್ರಬಲ ಅಡಚಣೆಯೆಂಬ ದೂರು ಬಹಳ ಹಳೆಯದು. ಈ ಬಗ್ಗೆ ಅತ್ಯಂತ ನಿಷ್ಠುರದ ಕ್ರಮ ಕೈಗೊಳ್ಳುವವರೆಗೂ ಯಥಾಸ್ಥಿತಿಯೇ ಮುಂದುವರಿಯುತ್ತದೆ. ಬೇರೆ ರಾಜ್ಯಗಳಲ್ಲಿ ಸಾಧ್ಯವಾಗಿರುವುದು ನಮ್ಮ ರಾಜ್ಯದಲ್ಲಿ ಮಾತ್ರ ಏಕೆ ಸಾಧ್ಯವಾಗುತ್ತಿಲ್ಲವೆಂಬುದಕ್ಕೆ ನಾವು ನಿಜವಾದ ಕಾರಣಗಳನ್ನು ಗುರುತಿಸಬೇಕು. ಎಲ್ಲ ತೊಡಕುಗಳ ಮೂಲದಲ್ಲೂ ಇಚ್ಛಾಶಕ್ತಿಯ ಕೊರತೆ ಇದೆಯೆಂಬುದನ್ನು ಎಲ್ಲಿಯವರೆಗೆ ನಾವು ಗುರುತಿಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ತೊಡಕುಗಳು ಮತ್ತಷ್ಟು ಜಡವಾಗುತ್ತಲೇ ಹೋಗುತ್ತವೆ.

ಕನ್ನಡಕ್ಕೆ ಸಿಗಬೇಕಾದ ಅಗ್ರಸ್ಥಾನ ಸಿಗದಿರುವುದಕ್ಕೆ ಒಂದು ಕಡೆ ಆಡಳಿತ ಯಂತ್ರದ ನಿಧಾನ ದ್ರೋಹ ಕಾರಣವಾದರೆ, ನಮ್ಮ ಜನರಲ್ಲಿ ಇರುವ ನೈಜಾಭಿಮಾನದ ಕೊರತೆಯೂ ಇನ್ನೊಂದು ಕಾರಣ. ಕನ್ನಡದ ಬಗ್ಗೆ ಒಂದಲ್ಲ ಒಂದು ಕಾರಣಕ್ಕಾಗಿ ಆಗಾಗ ಚಳುವಳಿಗಳು ಹೋರಾಟಗಳು ನಡೆಯುತ್ತವೆ; ಬೇರೆ ಭಾಷೆಯ ಜನಸಮುದಾಯಗಳ ಮೇಲೆ ಅಸಂಸ್ಕೃತ, ಅನಾಗರಿಕ ಅನಾವಶ್ಯಕ ಹಿಂಸಾಚಾರ ನಡೆಯುತ್ತವೆ. ಕೇವಲ ಸಮೂಹ ಸನ್ನಿಯಲ್ಲಿ ಉದ್ರೇಕಗೊಳ್ಳುವ ಅಭಿಮಾನದಿಂದ ನಾವು ಏನನ್ನೂ ನಿಜವಾಗಿ ಸಾಧಿಸಲಾರೆವು. ನಮ್ಮ ಭಾಷಾಭಿಮಾನ ಒಂದು ಸಹಜ ಸ್ಥಿತಿಯಾಗಬೇಕು. ಒಬ್ಬ ತಮಿಳು ಭಾಷಿಕನಿಗೆ ಕೇರಳದವನಿಗೆ ಅವನ ಭಾಷಾಭಿಮಾನ ಒಂದು ಸಹಜಸ್ಥಿತಿ. ಅದು ಕನ್ನಡದ

ದ್ವೇಷದಿಂದ ಉದ್ರೇಕಗೊಂಡಿದ್ದಲ್ಲ. ತಮಿಳರ ಸಭೆಯೋ ಸಮಾರಂಭದಲ್ಲೋ ಸಾಮಾನ್ಯ ಕಾರ್ಯಕರ್ತ ಒಂದೇ ಒಂದು ಆಂಗ್ಲ ಪದವನ್ನು ಬಳಸದೇ ತನಗೆ ತಿಳಿದದ್ದನ್ನು ನಿರರ್ಗಳವಾಗಿ ತಮಿಳಿನಲ್ಲಿ ಮಾತನಾಡುವುದನ್ನು ಕೇಳಿದ್ದೇವೆ. ಹಾಗೆ ಮಾತನಾಡುವ ತನ್ನ ಸಾಧನೆಯ ಬಗ್ಗೆ ಅವನಿಗೆ ಹೆಮ್ಮೆ ಇದೆ. ಅಭಿಮಾನವಿದೆ. ಅದೇ ನಮ್ಮ ಬಹುಪಾಲು ಕನ್ನಡ ಸಂಘಗಳು ನಡೆಸುವ ರಾಜ್ಯೋತ್ಸವ ಸಮಾರಂಭಗಳನ್ನು ನೋಡಿ ನನಗೆ ಮುಂದೇನು ಎಂಬ ಆತಂಕ ಉಂಟಾಗಿದೆ. ಇತ್ತೀಚಿಗೆ ಸಾಕಷ್ಟು ಪ್ರತಿಷ್ಠಿತರಿಂದಲೇ ಸಂಘಟಿಸಲ್ಪಟ್ಟ ಕನ್ನಡ ಸಂಘವೊಂದರ ರಾಜ್ಯೋತ್ಸವ ಕಾರ್ಯಕ್ರಮಕ್ಕೆ ಹೋಗಿದ್ದೆ. ಅದರ ಅಧ್ಯಕ್ಷ ಮಾಡಿದ ಸ್ವಾಗತ ಭಾಷಣದ ತುಣುಕೊಂದನ್ನು ಹೇಳುತ್ತೇನೆ ಕೇಳಿ. ಅವನು ಹೇಳಿದ್ದು: ''ನಾವು ಈ ರಾಜ್ಯೋತ್ಸವಕ್ಕೆ ಮಾನ್ಯಶ್ರೀ ಮಿಸ್ಟರ್ ಶ್ರೀನಿವಾಸ ರವರನ್ನು ಬರಬೇಕೆಂದು ಅಪ್ರೋಚ್ ಮಾಡಿದೆವು. ಅವರು ನಮ್ಮ ಇನ್ವಿಟೇಸನ್ ಅನ್ನು ಇಮ್ಮಿಡಿಯೆಟ್ಟಾಗಿ ಅಕ್ಸೆಪ್ಟ್ ಮಾಡಿದರು. ಬಂದಿದ್ದಾರೆ. ಈ ರಾಜ್ಯೋತ್ಸವ ಮಾಡುವ ಕಾರಣವೆಂದರೆ ನಮ್ಮ ಕನ್ನಡ ಭಾಷೆ ಇಂಪ್ರೂವ್ ಆಗಬೇಕು. ಅದಾಗಬೇಕಾದರೆ ಫಸ್ಟ್ ಆಫ್ ಆಲ್ ಎಲ್ಲರೂ ಮಸ್ಟ್ ಅಂಡ್ ಶುಡ್ ಕನ್ನಡದಲ್ಲೇ ಮಾತಾಡಬೇಕು.''

ರಾಜ್ಯೋತ್ಸವ ಸಮಾರಂಭಗಳಿಗೆ ಒಬ್ಬ ಸಾಹಿತಿ, ಒಬ್ಬ ರಾಜಕಾರಣಿ ಹಾಗೂ ಒಬ್ಬ ಸಿನೆಮಾ ನಟ ಹೀಗೆ ತ್ರಿಮೂರ್ತಿಗಳನ್ನು ಕರೆಯುವ ಒಂದು ಕ್ರಮ ಈಗ ಜಾರಿಯಲ್ಲಿದೆ. ರಾಜ್ಯೋತ್ಸವ ಎಂಬ ಕಾರಣಕ್ಕಾಗಿ ಸಾಹಿತಿ. ಅವನ ಭಾಷಣವನ್ನು ಅಲ್ಲಿ ಯಾರೂ ಕೇಳುವುದಿಲ್ಲ. ಭಾಷಣ ಬೇಕಾದ ವಾತಾವರಣವೇ ಅಲ್ಲಿ ಇರುವುದಿಲ್ಲ. ಮೊದಲೇ ಅವನಿಂದ ವಸೂಲು ಮಾಡಿದ ವಂತಿಗೆಯ ಕೃತಜ್ಞತೆಗಾಗಿ ರಾಜಕಾರಣಿ. ಇನ್ನು ಸಿನಿಮಾನಟ. ಅವನನ್ನು ಕರೆಯುವುದು ಅವನ ನೈಜ ವ್ಯಕ್ತಿತ್ವಕ್ಕಾಗಿ ಅಲ್ಲ. ಅವನಿಗೂ ಯಾರೂ ಭಾಷಣ ಮಾಡಲು ಬಿಡುವುದಿಲ್ಲ. ಬರಲಿ ಬರದಿರಲಿ ಬಲಾತ್ಕಾರವಾಗಿ ಸಿನೆಮಾ ಹಾಡು ಹಾಡಿಸುತ್ತಾರೆ ಅಥವಾ ಡೈಲಾಗ್ ಹೇಳಿಸುತ್ತಾರೆ. ನಂತರ ಒಂದು ಅದ್ದೂರಿ ಆರ್ಕೆಸ್ಟ್ರಾ. ಅಲ್ಲೊಂದು ಇಲ್ಲೊಂದು ಅಪ್ಪಿ ತಪ್ಪಿ ಕನ್ನಡ ಗೀತೆಗಳು. ಉಳಿದಂತೆ ಸಿನೆಮಾ ಸಂಗೀತ. ಕನ್ನಡ ರಾಜ್ಯೋತ್ಸವಗಳು ಕೇವಲ ಮೈಕಾಸುರನ ಹಾವಳಿಗಳಾಗಿ ಉಳಿಯದೇ ನಮ್ಮಲ್ಲಿ ನಾಡು ನುಡಿಯ ಬಗ್ಗೆ ಸಹಜಾಭಿಮಾನವನ್ನು ಕುದುರಿಸಬಲ್ಲ ಹಲವು ಹತ್ತು ಸೃಜನಶೀಲ ಕಾರ್ಯಕ್ರಮಗಳ ಚಳುವಳಿಗಳಾಗುವಂತೆ ಅವುಗಳಿಗೆ ಒಂದು ಪರ್ಯಾಯ ಮಾದರಿಯನ್ನು ಖಿಡ್ನಾಯಗೊಳಿಸಲು ಸಾಧ್ಯವೇ ಎಂಬುದನ್ನು ಯೋಚಿಸಬೇಕಾಗಿದೆ.

ನಮ್ಮ ಗಣೇಶೋತ್ಸವಗಳ ಪಾಡು ಹೀಗೆಯೇ ಆಗಿದೆ. ಗಣೇಶನ ಮೆರವಣಿಗೆಯಲ್ಲಿ ಕೇಳಿಬರುವ ಘೋಷಣೆಗಳನ್ನು ನೋಡಿ ಅಕ್ಕನ್ ಕೇಳು ಗಣೇಶ. ಅಣ್ಣನ್ ಕೇಳು ಗಣೇಶ. ಅಮ್ಮನ್ ಕೇಳು ಗಣೇಶ. ಅಪ್ಪನ್ ಕೇಳು ಗಣೇಶ. ಅಜ್ಜನ್ ಕೇಳು ಗಣೇಶ. ಅಜ್ಜಿ ಕೇಳು

ಗಣೇಶ, ಅಲ್ಲಿ ನೋಡು ಗಣೇಶ, ಇಲ್ಲಿ ನೋಡು ಗಣೇಶ, ಎಲ್ಲೆಲ್ಲಿ ನೋಡು ಗಣೇಶ ಇದಕ್ಕಿಂತ ಅರ್ಥಪೂರ್ಣವೂ ಮಂಗಲಕರವೂ ಆದ ಘೋಷಣೆಗಳನ್ನು ಕೂಗುವುದು ಸಾಧ್ಯವಿಲ್ಲವೇ? ಈ ಪ್ರಶ್ನೆಯನ್ನು ಯಾರೂ ಯಾರಿಗೆ ಕೇಳಬೇಕೆಂಬುದೇ ದೊಡ್ಡ ಪ್ರಶ್ನೆಯಾಗಿದೆ. ನಮ್ಮ ಚುನಾವಣೆ ಘೋಷಣೆಗಳಿಗೂ ಈಗ ಸಿನಿಮಾ ಹಾಗೂ ಇಂಗ್ಲಿಷ್ ರೋಗ ತಗಲಿದೆ. ಅತ್ಯಂತ ಜನಪ್ರಿಯ ಘೋಷಣೆ ಯಾವುದು ಗೊತ್ತೆ? ಟ್ವಿಂಕಲ್ ಟ್ವಿಂಕಲ್ ಲಿಟ್ಲ ಸ್ಟಾರ್...... ಸೂಪರ್ ಸ್ಟಾರ್. ಇಲ್ಲಿ ತಮಗೆ ಬೇಕಾದವರ ಹೆಸರನ್ನೆಲ್ಲಾ ಸೇರಿಸಿಕೊಂಡು ಘೋಷಣೆಗಳನ್ನು ಕೂಗುತ್ತಿರುತ್ತಾರೆ.

ಕೆಲವು ವರ್ಷಗಳ ಹಿಂದೆ ಒಮ್ಮೆ ನಾನು ಟೋಕಿಯೋಗೆ ಹೋಗಿದ್ದೆ. ಅಷ್ಟೊಂದು ದೊಡ್ಡ ನಗರದಲ್ಲಿ ಎಲ್ಲಿಯೂ ಒಂದೇ ಒಂದು ಆಂಗ್ಲ ನಾಮ ಫಲಕಗಳು ನನಗೆ ಕಾಣಸಿಗಲಿಲ್ಲ. ನಾನು ಉಪಯೋಗಿಸುತ್ತಿದ್ದ ಚತುಶ್ಚಕ್ರವಾಹನದ ಚಾಲಕನಿಗೆ 'ಹೋಟೆಲ್' ಎಂಬ ಪದ ಸಹ ಗೊತ್ತಿರಲಿಲ್ಲ. ಅದೇ ಇತ್ತೀಚೆಗೆ ಒಮ್ಮೆ ಶಿವಮೊಗ್ಗದಿಂದ ಬೆಂಗಳೂರಿಗೆ ಬಸ್ಸಿನಲ್ಲಿ ಬರುವಾಗ ಕುತೂಹಲಕ್ಕಾಗಿ ತುಮಕೂರಿನ ಎಲ್ಲ ನಾಮಫಲಕಗಳನ್ನೂ ಓದುತ್ತಾ ಹೋದೆ. ಅಪ್ಪಟ ಕನ್ನಡ ಶಬ್ದಗಳಿಂದ ಕೂಡಿದ ಒಂದೇ ಒಂದು ನಾಮ ಫಲಕವೂ ಸಿಗಲಿಲ್ಲ. ಎಲ್ಲವೂ ಕನ್ನಡ ಲಿಪಿಯಲ್ಲಿಯೂ, ಆಂಗ್ಲ ಲಿಪಿಯಲ್ಲಿಯೂ ಬರೆದ ಆಂಗ್ಲ ನಾಮಫಲಕಗಳೇ ಆಗಿದ್ದವು. ಕೆಲವು ದಿನಗಳ ಹಿಂದೆ ಒಂದು ಸಂಘದವರು, ರಾಜ್ಯೋತ್ಸವ ಸಮಾರಂಭಕ್ಕೆ ನನ್ನನ್ನು ಆಹ್ವಾನಿಸಲು ಬಂದರು. ಸಂಘದ ಹೆಸರು 'ಪುಲಕೇಶಿ ಯಂಗ್ ಟೈಗರ್ಸ್ ಕನ್ನಡ ಅಸೋಸಿಯೇಶನ್'. ಸಂಘದ ಹೆಸರನ್ನು ಪೂರ್ಣವಾಗಿ ಕನ್ನಡಕ್ಕೆ ಬದಲಾಯಿಸಲು ಒಪ್ಪಿದರೆ, ಬರುವುದಾಗಿ ಶರತ್ತು ಹಾಕಿದೆ. ಕನ್ನಡದಲ್ಲಿ ಅದಕ್ಕೆ ಫೋರ್ಸ್ ಇರಲ್ಲವೆಂದು ವಾದಿಸಿದರು. ಪುಲಕೇಶಿ ಮರಿಹುಲಿಗಳ ಕನ್ನಡ ಸಂಘವೆಂದು ಕರೆದರೆ ಏನೂ ತೊಂದರೆ ಇಲ್ಲವೆಂದು ಸೂಚಿಸಿದೆ; ಯೋಚಿಸಿಕೊಂಡು ಬರುತ್ತೇವೆಂದು ಹೋದವರು ಮತ್ತೆ ಬರಲೇ ಇಲ್ಲ. ಆಂಗ್ಲ ಭಾಷೆಯಲ್ಲಿ ಹೇಳಬಹುದಾದನ್ನು ಕನ್ನಡದಲ್ಲೇ ಅಷ್ಟೇ ಕಸುವಾಗಿ ಹೇಳಬಹುದೆಂಬ ಜ್ಞಾನ ಹಾಗೂ ನಂಬಿಕೆ ಈವರೆಗೂ ಮೂಡಿಲ್ಲದಿರುವುದು ಅತ್ಯಂತ ದುರದೃಷ್ಟಕರ.

ಕನ್ನಡದಲ್ಲೇ ನಾಮಫಲಕ ಹಾಕುವ ಇನ್ನೊಂದು ಅತಿರೇಕದ ಮಾದರಿಯನ್ನು ನಾವು ಗಮನಿಸರಬಹುದು. ಸಂಸ್ಕೃತಿ ಶಬ್ದಗಳ ಅರ್ಥಹೀನ ಬಳಕೆ. ಹೋಟೆಲ್ ಫಲಹಾರದರ್ಶಿನಿ, ಉಪಹಾರದರ್ಶಿನಿ. ಹಾಗೆಂದರೆ ಅದರ ಅರ್ಥವೇನೆಂಬುದರ ಬಗ್ಗೆ ಅವರು ಗಮನವನ್ನೇ ಕೊಟ್ಟಿಲ್ಲ. ಅದೆಲ್ಲ ಹೋಗಲಿ ಮೊನ್ನೆ ಒಂದು ಕಡೆ ನೋಡಿದೆ 'ಹೋಟೆಲ್ ನಾಗದರ್ಶಿನಿ'. ನೇರವಾಗಿ ಆಂಗ್ಲ ಭಾಷೆಯಿಂದ ಗಣಕಯಂತ್ರದ

ಸಹಾಯದಿಂದ ತರ್ಜುಮೆಗೊಂಡ. ಬಹುರಾಷ್ಟ್ರೀಯ ಸಂಸ್ಥೆಗಳ ಕನ್ನಡ ಜಾಹೀರಾತುಗಳನ್ನು ರಸ್ತೆಗಳ ಪಕ್ಕದಲ್ಲೂ ದೂರದರ್ಶನದಲ್ಲೂ ನೀವು ಗಮನಿಸಿರಬಹುದು. ಹೇಗೆ ಜೋಡಿಸಿಕೊಂಡರೂ ನಮಗೆ ಅರ್ಥವೇ ಆಗದ ಅದ್ಭುತ ಕನ್ನಡದ ಪ್ರಯೋಗವನ್ನು ನಾವು ಅಲ್ಲಿ ನೋಡಬಹುದು. ನಿಮ್ಮಲ್ಲಿ ಎಷ್ಟು ಮಂದಿ ಬಾಡಿಗೆ ಟ್ಯಾಕ್ಸಿಯಲ್ಲಿ ಪಯಣಿಸಿದ್ದೀರೋ ಗೊತ್ತಿಲ್ಲ. ಚಾಲಕನಿಗೆ ನಿದ್ರೆ ಬರದಂತೆ ಎಡೆಬಿಡದೆ ಬಿಚ್ಚಿಕೊಂಡು ಕಿವಿಗೆ ಚುಚ್ಚಿ ಚುಚ್ಚುವ ಧ್ವನಿ ಸುರಳಿಯಲ್ಲಿರುವ ಕನ್ನಡ ಕಾವ್ಯ ದೇವರಿಗೇ ಪ್ರೀತಿ. ಪ್ರಯಾಣದ ನಂತರ ಪ್ರಯಾಣದ ಆಯಾಸಕ್ಕಿಂತ ಧ್ವನಿಸುರಳಿಯಿಂದಾದ ಆಯಾಸದಿಂದ ಸುಧಾರಿಸಿಕೊಳ್ಳುವುದೇ ಸಾಕಷ್ಟು ಸಮಯ ಹಿಡಿಯುತ್ತದೆ. ಜನಮನದಲ್ಲಿ ಕನ್ನಡ ಭಾಷೆಯ ಬಗ್ಗೆ ನೈಜ, ಸಹಜ ಅಭಿಮಾನವನ್ನು ಬೆಳೆಸಬಲ್ಲ, ಭಾಷೆಯನ್ನು ಸುಂದರವಾಗಿಯೂ ಪುಷ್ಟವಾಗಿಯೂ ನಮ್ಮೆಲ್ಲ ದೈನಿಕ ಚಟುವಟಿಕೆಗಳಲ್ಲಿ ಬಳಸಲು ಕಲಿಸಬಲ್ಲ ಅನ್ಯಭಾಷೆ ಹಾಗೂ ಜನಸಮುದಾಯಗಳ ಬಗ್ಗೆ ಅಸಹನೆ, ದ್ವೇಷಾಸೂಯೆ ಸಮೂಹವನ್ನು ಹಿಂಸಾಚಾರಕ್ಕೆ ಎಡೆಮಾಡಿದ ಇತ್ಯರ್ಥಕ ಕನ್ನಡ ಚಳುವಳಿಯೊಂದರ ಅಗತ್ಯ ಇನ್ನೂ ಹಾಗೆಯೇ ಉಳಿದಿದೆ. ಅಂಥ ಚಳುವಳಿಗಾರರಾಗಿ ನಾವು ಅರ್ಥಮಾಡಿಕೊಳ್ಳಬೇಕಾದ ಮೂಲಭೂತ ಮಾತೊಂದಿದೆ. ಕನ್ನಡಕ್ಕೆ ಬೇರೆ ಯಾರಿಂದಲೂ ಅಪಾಯವಿಲ್ಲ. ಕನ್ನಡ ಈಗಾಗಲೇ ಉಧೃತವಾದ ಸಮೃದ್ಧ ಭಾಷೆ. ಕನ್ನಡ ನಮ್ಮಿಂದ ಉದ್ಧಾರವಾಗಬೇಕಿಲ್ಲ. ಕನ್ನಡದ ಮೂಲಕ ನಾವು ಉದ್ಧಾರವಾಗಬೇಕು. ಅದಕ್ಕೆ ಸಮೂಹ ಸನ್ನಿಗಿಂತ ಸತತೋದ್ಯೋಗದ ಅವಶ್ಯಕತೆ ಜಾಸ್ತಿ ಇದೆ. ನಾವು ತಲೆಬಗ್ಗಿಸಿ ಕೆಲಸ ಮಾಡುವುದೊಂದೇ 'ಕನ್ನಡದ ಮಾತು ತಲೆ ಎತ್ತಿ' ನಿಲ್ಲುವಂತೆ ಮಾಡುವ ಮಾರ್ಗ.

ಕನ್ನಡ ಮಾಧ್ಯಮದ ಬಗ್ಗೆ ಆಗಾಗ ಗೊಂದಲಗಳು ಏಳುತ್ತಲೇ ಇರುವುದನ್ನು ಅಸಹಾಯಕರಾಗಿ ನೋಡುತ್ತಿದ್ದೇವೆ. ನಿಜವಾಗಿ ಸಮಸ್ಯೆಯಿರುವುದು ಮಾಧ್ಯಮದ್ದಲ್ಲ. ಶಾಲೆಗಳ ಸ್ಥಿತಿಗತಿ ಹಾಗೂ ಗುಣಮಟ್ಟಕ್ಕೆ ಸಂಬಂಧಿಸಿದ್ದು. ಒಂದು ಭಾಷೆಯಾಗಿ ಇಂಗ್ಲಿಷ್‌ನ ಅವಶ್ಯಕತೆಯನ್ನು ಯಾರು ಅಲ್ಲಗಳೆಯುವುದು ಸಾಧ್ಯವಿಲ್ಲ. ಆದರೆ ಮಾಧ್ಯಮವಾಗಿ ಅದರ ಅಗತ್ಯವಿಲ್ಲ. ಇರಬಾರದು. ಒಳ್ಳೆಯ ಗುಣಮಟ್ಟದ ಕನ್ನಡ ಮಾಧ್ಯಮದ ಶಾಲೆಗಳನ್ನು ಸ್ಥಾಪಿಸಿ ಅಲ್ಲಿ ಒಂದು ಭಾಷೆಯಾಗಿ ಇಂಗ್ಲಿಷ್ ಕಲಿಸುವ ವ್ಯವಸ್ಥೆ ಇದ್ದಲ್ಲಿ ಮಾಧ್ಯಮದ ಗೊಂದಲ ಸಾಕಷ್ಟು ತಿಳಿಯಾದೀತು. ಕನ್ನಡದ ಮಾಧ್ಯಮದ ಬಗ್ಗೆ ಬೇಕಷ್ಟು ಮಾತಾಡುತ್ತೇವೆ ನಿಜ. ಆದರೆ ಆ ಬಗ್ಗೆ ಮಾಡಬೇಕಾದ ಕೆಲಸಗಳ ಬಗ್ಗೆ ನಾವೆಷ್ಟು ಗಮನಹರಿಸಿದ್ದೇವೆ. ಬೇಕಾದ ಪಠ್ಯಪುಸ್ತಕಗಳ ತಯಾರಿಯ ಗೊಂದಲದಲ್ಲೇ ನಾವಿನ್ನೂ ಮುಳುಗಿದ್ದೇವೆ ನಮ್ಮ ಮಕ್ಕಳನ್ನು ನಿಜವಾದ ಅರ್ಥದಲ್ಲಿ

ವಿದ್ಯಾವಂತರನ್ನಾಗಿ ಮಾಡಲು ಬೇಕಾದ ಅಸಂಖ್ಯಾತ ಅನ್ಯ ವಿಷಯಗಳ ಬಗ್ಗೆ ಕನ್ನಡದಲ್ಲಿ ಅಚ್ಚುಕಟ್ಟಾದ ಪುಸ್ತಕಗಳನ್ನು ಪ್ರಕಟಿಸಿ ವಿತರಿಸುವ ವಿಚಾರದಲ್ಲಿ ನಮ್ಮ ಸಾಧನೆ ಅತ್ಯಲ್ಪ. ಶಿಶುವಿಹಾರಗಳಲ್ಲಿ ಮಕ್ಕಳಿಗೆ ಹಾಡಲು ಕನ್ನಡ ಹಾಡಿನ ಎಷ್ಟು ಪುಸ್ತಕಗಳನ್ನು ಒದಗಿಸಿದ್ದೇವೆ? ವಿವಿಧ ವಯಸ್ಸಿನ ಮಕ್ಕಳಿಗೆ ಅವರವರ ವಯೋಮಾನಕ್ಕೆ ತಕ್ಕಂಥ, ಓದುವ ಅಭಿರುಚಿಯನ್ನು ಬೆಳೆಸಬಲ್ಲಂಥಾ ಎಷ್ಟು ಪುಸ್ತಕಗಳು ಕನ್ನಡದಲ್ಲಿ ಬಂದಿವೆ? ಇವು ಬಹು ಮುಖ್ಯ ಪ್ರಶ್ನೆಗಳು. ಈ ಬಗ್ಗೆ ವಿಶೇಷ ಯೋಜನೆಗಳನ್ನು ಕಾರ್ಯಗತಗೊಳಿಸುವುದು ನಮ್ಮ ಇಂದಿನ ತುರ್ತು ಅವಶ್ಯಕತೆಗಳಲ್ಲೊಂದು. ಹೊಸದಾಗಿ ರಚನೆಗೊಂಡ ಪುಸ್ತಕ ಪ್ರಾಧಿಕಾರ, ವಿವಿಧ ಪ್ರಸಾರಾಂಗಗಳು ಈ ಬಗ್ಗೆ ಆದ್ಯ ಗಮನ ನೀಡುವುದು ಅತ್ಯಗತ್ಯ. ಇದೀಗ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ಈ ನಿಟ್ಟಿನಲ್ಲಿ ಮಹತ್ವದ ಹೆಜ್ಜೆ ಇಟ್ಟಿರುವುದು ಸ್ತುತ್ಯಾರ್ಹ.

ಸಂಸ್ಕೃತಿಯ ಅವಿಭಾಜ್ಯ ಅಂಗಗಳಿಂದ ಸಾಹಿತ್ಯ, ಸಂಗೀತ, ನೃತ್ಯ, ನಾಟಕಗಳಿಗೆ ಸಂಬಂಧಿಸಿದಂತೆ ಕೆಲಸ ಮಾಡಲು ನಿಯೋಜಿಸಲ್ಪಟ್ಟ ಅನೇಕ ಅಕಾಡೆಮಿಗಳು ರಾಜ್ಯದಲ್ಲಿವೆ. ಈ ಅಕಾಡೆಮಿಗಳು ಸರ್ಕಾರದ ಮರ್ಜಿ ಕಾಯಬೇಕಾದ ಸಂಸ್ಥೆಗಳಾಗುವುದು ಒಂದು ದುರಂತ. ಹಿಂದೆ ಈ ಖಾತೆಗೆ ಸಂಬಂಧಪಟ್ಟ ಸಚಿವನಾಗಿದ್ದಾಗ ಸಾಮಾನ್ಯವಾದ ಸರ್ಕಾರಿ ಆಜ್ಞೆಗೆ ಬದಲಾಗಿ, ಅಕಾಡೆಮಿಗಳಿಗೆ ಒಂದು ವಿಶೇಷವಾದ ಸ್ವಯಂ ಆಡಳಿತ ಪತ್ರ ನೀಡಿ ಸರ್ಕಾರ ಹಾಗೂ ಮಂತ್ರಿಗಳು ಬದಲಾದಾಗಲೆಲ್ಲ ಅವುಗಳು ಸ್ಥಗಿತಗೊಳ್ಳದಂತೆ ಸದಾಕಾಲ ಸರ್ಕಾರದ ಮರ್ಜಿಗೆ ಕಾಯದೇ ಅವುಗಳ ಕಾರ್ಯ ಸಾರೋದ್ಧಾರವಾಗಿ ನಡೆದುಕೊಂಡು ಹೋಗುವಂತೆ ವ್ಯವಸ್ಥೆ ಮಾಡಿದ್ದೆ. ಆದರೆ ಆನಂತರ ಯಾವಾಗ ಹೇಗೆ ಆ ಪರಿಸ್ಥಿತಿ ಬದಲಾಯಿತೋ ನನಗೆ ಗೊತ್ತಿಲ್ಲ. ಇಂತಹ ಪ್ರಮುಖ ಸಾಂಸ್ಕೃತಿಕ ಸಂಸ್ಥೆಗಳು ಪೂರ್ಣವಾಗಿ ಸರ್ಕಾರದ ಕೈಗೊಂಬೆಗಳಾಗದಂತೆ ಅವುಗಳಿಗೆ ಸಾಕಷ್ಟು ಸ್ವಾಯತ್ತತೆ ಇರಬೇಕಾದದ್ದು ಅತ್ಯವಶ್ಯಕ. ಹಾಗೆ ಮಾಡುವಂತೆ ನಮ್ಮ ಸಾಂಸ್ಕೃತಿಕ ಜಗತ್ತಿನ ಮುಖ್ಯಸ್ಥರು ಸರ್ಕಾರದ ಮೇಲೆ ಈಗಲಾದರೂ ಒಮ್ಮತದ ಒತ್ತಡ ತರಬೇಕು.

ಭವಿಷ್ಯದ ಸಾಂಸ್ಕೃತಿಕ ಸ್ವರೂಪದ ಬಗ್ಗೆ ಚಿಂತಿಸುವಾಗ ಬಹಳ ಮುಖ್ಯವಾಗಿ ಗಮನ ನೀಡಬೇಕಾಗಿರುವ ಇನ್ನೊಂದು ವಿಚಾರ ಸಿನೆಮಾ. ನಮ್ಮ ಇಂದಿನ ಸಾಂಸ್ಕೃತಿಕ ಸಂದರ್ಭದಲ್ಲಿ ಎಲ್ಲ ಸಮೂಹ ಸಂವಹನ ಮಾಧ್ಯಮಗಳ ಪಾತ್ರವನ್ನು ನಾವು ಸ್ಪಷ್ಟ ರೀತಿಯಲ್ಲಿ ಕಲ್ಪಿಸಿಕೊಂಡು ಅವುಗಳನ್ನು ಜನಪರವಾಗಿ ಬಳಸಬೇಕಾದದ್ದು ಅತ್ಯಗತ್ಯ. ಸಿನೆಮಾದಂಥ ಒಂದು ಪ್ರಬಲ ಸಮೂಹ ಮಾಧ್ಯಮ ಇಂದು ದೊಡ್ಡ ದೊಡ್ಡ ಉದ್ಯಮಿಗಳ ಕೈಯಲ್ಲೂ, ಸರ್ಕಾರಗಳ ಕೈಯಲ್ಲೂ ಸಿಕ್ಕು ನರಳುತ್ತಿದೆ. ಸರ್ಕಾರಗಳು ಈ

ಮಾಧ್ಯಮವನ್ನು ಜನರ ಜತೆ ಮುಕ್ತ ಸಂವಾದಕ್ಕೆ. ಅವರ ಕ್ರಿಯಾಶೀಲ ಪಾಲುಗಾರಿಕೆಗೆ ಚಾಲನೆ ನೀಡಲು ಉಪಯೋಗಿಸುವ ಬದಲು ತನ್ನ ತುತ್ತೂರಿ ಊದುವ ಏಕಮುಖಿ ಸಂಚಾರಕ್ಕೆ ಬಳಸುತ್ತಿವೆ. ದುಡ್ಡಿದ್ದ ದೊಡ್ಡಪ್ಪಗಳು ಸಿನೆಮಾವನ್ನು ಹಣ ದ್ವಿಗುಣಗೊಳಿಸುವ ತಂತ್ರ ಹಾಗೂ ಯಂತ್ರವಾಗಿಸಿದ್ದಾರೆ. ಜನರ ಬೇರೆ ಬೇರೆ ಮಾನಸಿಕ ದೌರ್ಬಲ್ಯಗಳನ್ನು ಗಮನಿಸಿ. ಗುಣಿಸಿ. ಭಾಗಿಸಿ.ಕೂಡಿ.ಕಳೆದು ಸಿದ್ಧಪಡಿಸಿದ ಕೋಷ್ಟಕಗಳನ್ನು ಬಳಸಿ ತಯಾರಾಗುವ ದುಬಾರಿ ವೆಚ್ಚದ ಸಿನೆಮಾ ಭಾರತದ ಸಂಸ್ಕೃತಿಯನ್ನು ವಿಕೃತಗೊಳಿಸಿದೆ. ಹಾಗೂ ಅಪಾಯಕಾರಿ ಸಾಮಾಜಿಕ ಪರಿಣಾಮಗಳಿಗೆ ಕಾರಣವಾಗಿವೆ. ಈ ದುಬಾರಿ ವೆಚ್ಚದ ಕೋಷ್ಟಕ ಸಿನೆಮಾಕ್ಕೆ ಪರ್ಯಾಯ ಬಂಗಾಲದಲ್ಲಿ ಸತ್ಯಜಿತ್ ರೇಯವರಿಂದ ಪ್ರಾರಂಭಗೊಂಡ ಹೊಸ ಅಲೆಯ ಸೃಜನಶೀಲ ಸಿನೆಮಾ. ಕರ್ನಾಟಕದಲ್ಲಿ ಕೆಲವು ಕಾಲದ ಹಿಂದೆ ಪ್ರತ್ಯಕ್ಷವಾದ ಈ ಹೊಸ ಅಲೆಯ ಸಿನೆಮಾ ಹಾಗೇ ನೆಲೆನಿಲ್ಲದೆ ಅತ್ಯಲ್ಪ ಅವಧಿಯಲ್ಲೇ ಅಂತರ್ಧಾನವಾದದ್ದು ದುರದೃಷ್ಟಕರ. ಇದಕ್ಕೆ ಕಾರಣಗಳನ್ನು ಹುಡುಕುವ ಗೋಜಿಗೇ ನಾವು ಹೋಗದಿದ್ದದ್ದು ಇನ್ನೂ ಹೆಚ್ಚು ದುರದೃಷ್ಟಕರವಾದ ಮಾತು. ಸಿನೆಮಾದ ಬಗ್ಗೆ ನಾವು ಎರಡು ರೀತಿಯಲ್ಲಿ ಯೋಚಿಸಬೇಕು ಹಾಗೂ ಯೋಜಿಸಬೇಕು. ಒಂದನೆಯದಾಗಿ ಚಲನಚಿತ್ರ ಒಂದು ಕೈಗಾರಿಕೆಯಾಗಿ ಅನೇಕ ಜನರಿಗೆ ಅನ್ನ. ನೆರಳಿಗೆ ದಾರಿಯಾಗಿ ಉಳಿದು ಬೆಳೆಯಬೇಕು. ಎರಡನೆಯದಾಗಿ. ಒಂದು ಪ್ರಬಲ ಸಮೂಹ ಮಾಧ್ಯಮವಾಗಿ. ಒಂದು ಹೊಸಭಾಷೆಯಾಗಿ ಅದು ತನ್ನ ಆರೋಗ್ಯಕರ ಕ್ರಿಯಾಶೀಲ ಪಾತ್ರವನ್ನು ಸಮರ್ಥವಾಗಿ ನಿರ್ವಹಿಸಬೇಕು. ಈ ಎರಡು ಅಂಶಗಳನ್ನು ಯೋಚಿಸಿ ಯೋಜಿಸಿದ ಸಮಗ್ರ ಚಲನಚಿತ್ರ ನೀತಿಯೊಂದನ್ನು ಸರ್ಕಾರ ಕಾರ್ಯಗತ ಮಾಡಬೇಕು. ಹುಟ್ಟಿನಿಂದಲೇ ಬಾಲಗ್ರಹಪೀಡಿತವಾದ ಚಲನಚಿತ್ರ ಅಭಿವೃದ್ಧಿ ನಿಗಮವೊಂದು ನಮ್ಮ ರಾಜ್ಯದಲ್ಲಿದೆ. ಈಗ ಅತ್ತ ಖಾಸಗಿಯೂ ಅಲ್ಲದ. ಸರ್ಕಾರಿಯೂ ಅಲ್ಲದ ತ್ರಿಶಂಕುವಾಗಿರುವ ಈ ನಿಗಮವನ್ನು ಕೇರಳದ ಮಾದರಿಯಲ್ಲಿ ಸಂಪೂರ್ಣ ಸರ್ಕಾರಿ ನಿಗಮವನ್ನಾಗಿ ಮಾಡಿ. ಮೇಲೆ ಸೂಚಿಸಿದ ಒಂದು ಸಮಗ್ರ ಚಲನಚಿತ್ರ ನೀತಿಯನ್ನು ಕಾರ್ಯಗತಗೊಳಿಸುವ ಜವಾಬ್ದಾರಿ ಹೊತ್ತ ಸಾಂಸ್ಥಿಕ ಘಟಕವನ್ನಾಗಿ ಪರಿವರ್ತಿಸುವುದು ಅತ್ಯಂತ ಅಪೇಕ್ಷಣೀಯ. ಯಾವುದೇ ಆರ್ಥಿಕ ಸಂಕಷ್ಟಗಳ ಅಪಾಯಕ್ಕೆ ಒಳಗಾಗದೇ. ಒಬ್ಬ ಸೃಜನಶೀಲ ವ್ಯಕ್ತಿ ಸಿನೆಮಾ ತಯಾರಿಸಲು ಸಾಧ್ಯವಾಗುವಂತೆ. ಸಿನೆಮಾ ತಂತ್ರಜ್ಞತೆ ಅವನ ಕೈಗೆಟುಕುವಂತೆ ಏರ್ಪಾಡು ಮಾಡುವುದು ನಾವು ಮಾಡಬೇಕಾದ ಮೊದಲ ಕರ್ತವ್ಯ. ಹಾಗೆಯೇ ಚಲನಚಿತ್ರ ವಿಮರ್ಶೆ ಮತ್ತು ರಸಗ್ರಹಣದ ಸುತ್ತ ಅನೇಕ ಬಗೆಯ ಸಾಂಸ್ಕೃತಿಕ ಚಟುವಟಿಕೆಗಳನ್ನು ಹೆಣೆದುಕೊಂಡ ಚಲನಚಿತ್ರ ಸಮಾಜಗಳ

ಜಾಲವೊಂದನ್ನು ಪ್ರೋತ್ಸಾಹಿಸುವುದು ಹಾಗೂ ನಿರ್ಮಾಣ ಮಾಡುವುದು ನಮ್ಮ ಚಲನಚಿತ್ರ ನೀತಿಯ ಅವಿಭಾಜ್ಯ ಅಂಗವಾಗಿರಬೇಕು. ಕೆಟ್ಟ ಸಿನೆಮಾಗಳ ಧಾಳಿಯಿಂದ ನಮ್ಮ ನೈಜ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳುವುದು ನಮ್ಮ ಇಂದಿನ ಸಾಂಸ್ಕೃತಿಕ ಕಾಳಜಿಗಳಲ್ಲಿ ಬಹುಮುಖ್ಯವಾದದ್ದು. ದುಬಾರಿವೆಚ್ಚದ ಕೋಟ್ಯಕ ಸಿನೆಮಾದ ಹಿಂದಿರುವ ನಿಹಿತಸ್ವಾರ್ಥ ಶಕ್ತಿಗಳು ಹಣ ಹಾಗೂ ತೋಳ್ಬಲಗಳಿಗೆ ಹಾಗೂ ಪಕ್ಷಪಾತದ ಆರೋಪಗಳಿಗೆ ಅಂಜಿ ನಮ್ಮ ಸರ್ಕಾರಗಳು ಸಿನೆಮಾದ ಗುಣಮಟ್ಟದ ಬಗ್ಗೆ ತಟಸ್ಥವಾಗಿ ನಿಷ್ಕ್ರಿಯವಾಗಿವೆ. ಇದು ಖಂಡಿತಾ ಸರಿ ಅಲ್ಲ. ಹಾಗೆ ನೋಡಿದರೆ ನಮ್ಮ ಸರ್ಕಾರಗಳು ಒಂದಲ್ಲ ಒಂದು ಕಾರಣಗಳಿಗೆ ಅಂಜಿ ಯಾವ ಅಪೇಕ್ಷಣೀಯ ನಿಗ್ರಹಾನುಗ್ರಹಗಳನ್ನು ಮಾಡದ ಅಸಹಾಯಕ ಪರಿಸ್ಥಿತಿಯಲ್ಲೇ ಉಳಿದು ಬಿಟ್ಟಿದ್ದಾವೆ. ನಿಗ್ರಾಹನುಗ್ರಹವನ್ನು ಬಳಸದ ಸರ್ಕಾರ ಸರ್ಕಾರವೇ ಅಲ್ಲ. ಅದನ್ನು ಜನಪರವಾಗಿ ಬಳಸುವ ಸಂಸ್ಕಾರ ಸರ್ಕಾರಗಳಿಗಿರಬೇಕು. ಅಂತಹ ಸರ್ಕಾರಗಳೇ ಅಧಿಕಾರಕ್ಕೆ ಬರುವಂತೆ ಜನ ನೋಡಿಕೊಳ್ಳಬೇಕು. ಅನಿರ್ಬಂದಿತ ಸರ್ವತಂತ್ರ ಸ್ವಾತಂತ್ರವನ್ನು ಬಹುಬೇಗನೆ, ಯಾವುದೇ ಸಾಮಾಜಿಕ ಜವಾಬ್ದಾರಿ ಇರದ ಆರ್ಥಿಕ ನಿಹಿತ ಸ್ವಾರ್ಥ ಶಕ್ತಿಗಳು ತಮ್ಮ ಕೈವಶಮಾಡಿಕೊಳ್ಳುತ್ತವೆ. ಆದ್ದರಿಂದ ಆರೋಗ್ಯಕರ ನಿರ್ಬಂಧಗಳನ್ನು ಜಾರಿಗೊಳಿಸುವ ಸಾಮಾಜಿಕ ಜವಾಬ್ದಾರಿಯನ್ನು ನಮ್ಮ ಸರ್ಕಾರಗಳು ಹೊರಲೇಬೇಕು.

ಸಿನೆಮಾಕ್ಕೆ ಸಂಬಂಧಿಸಿದಂತೆ ಸರ್ಕಾರದ ಕೈಯಲ್ಲಿ ಈಗ ಮೂರು ಅಸ್ತ್ರಗಳಿದ್ದಾವೆ. ಒಂದು ಸೆನ್ಸಾರ್. ಎರಡು ಸಹಾಯಧನ. ಮೂರು ತೆರಿಗೆ ರಿಯಾಯ್ತಿ. ಈ ಮೂರನ್ನು ಉದ್ದೇಶ ಶುದ್ಧಿಯಿಂದ ಸರ್ಕಾರ ಬಳಸಿದರೆ ಆರೋಗ್ಯಕರ ಸಿನೆಮಾ ಜಗತ್ತನ್ನು ನಿರ್ಮಿಸಬಹುದು. ಮೊದಲನೆಯದಾಗಿ ಸೆನ್ಸಾರನ್ನು ಬಹಳ ಬಿಗಿ ಮಾಡಬೇಕು. ಎರಡನೆಯದಾಗಿ ಸಿನೆಮಾ ಕೈಗಾರಿಕೆಯನ್ನು ಪ್ರೋತ್ಸಾಹಿಸುವ ಸಲುವಾಗಿ ರಾಜ್ಯದಲ್ಲಿ ತಯಾರಾಗುವ ಎಲ್ಲ ಸಿನೆಮಾಗಳಿಗೂ ಒಂದೇ ರೀತಿಯ ಸಹಾಯಧನ ನೀಡುವುದರಲ್ಲಿ ಏನೂ ಅಭ್ಯಂತರವಿಲ್ಲ. ಆದರೆ ಎಲ್ಲ ಚಲನಚಿತ್ರಗಳಿಗೂ ಏಕರೀತಿಯ ತೆರಿಗೆ ರಿಯಾಯ್ತಿ ನೀಡುವುದಕ್ಕೆ ಯಾವ ಅರ್ಥವಾಗಲಿ ತರ್ಕವಾಗಲಿ ಇಲ್ಲ. ಉತ್ತಮ ಸೃಜನಶೀಲ ಚಲನಚಿತ್ರಗಳಿಗೆ ಮಾತ್ರ ಅವುಗಳ ಗುಣಮಟ್ಟಕ್ಕೆ ಅನುಸಾರವಾಗಿ ವಿವಿಧ ಪ್ರಮಾಣದ ತೆರಿಗೆ ರಿಯಾಯ್ತಿ ನೀಡುವುದರಿಂದ ಅಂಥ ಚಿತ್ರ ನಿರ್ಮಾಣಕ್ಕೆ ಪ್ರೋತ್ಸಾಹ ನೀಡಿದಂತಾಗುತ್ತದೆ. ಹಾಗೂ ಅಂತಹ ಚಿತ್ರಗಳಿಗೆ ಹೆಚ್ಚಿನ ಪ್ರದರ್ಶನಾವಕಾಶವೂ ದೊರೆಯುತ್ತದೆ.

ಕಳೆದ ಸಿನೆಮಾ ಸಂಸ್ಕೃತಿಯ ದಾಳಿಯನ್ನೆದರಿಸಲು ರಂಗಭೂಮಿಯ ಕ್ಷೇತ್ರವನ್ನು ಬಲಪಡಿಸುವುದೂ ಒಂದು ಅಗತ್ಯ ಕ್ರಮ. ವೃತ್ತಿರಂಗಭೂಮಿ ಹೆಚ್ಚು ಕಡಿಮೆ ನಶಿಸಿ

ಹೋಗುತ್ತಿರುವ ಈ ಸಂದರ್ಭದಲ್ಲಿ ಅವುಗಳನ್ನುಳಿಸಲು. ಬೆಳೆಸಲು ಆಗತ್ಯಕ್ರಮ ಕೈಗೊಳ್ಳಬೇಕು. ಕೆಲವು ಜಿಲ್ಲಾ ಕೇಂದ್ರಗಳಲ್ಲಿ ಅದ್ದೂರಿ ರಂಗಮಂದಿರಗಳನ್ನು ಕಟ್ಟಿ ಪೂರೈಸುವ ಸಾಹಸದಲ್ಲೇ ನಾವು ಸುಸ್ತಾಗಿ ಕುಳಿತಿದ್ದೇವೆ. ಅತ್ಯಂತ ಕಡಿಮೆ ವೆಚ್ಚದಲ್ಲಿ ರಾಜ್ಯದಲ್ಲಿ ನಾಟಕಗಳ ಬಗ್ಗೆ ಆಸಕ್ತಿ ಇರುವ ಕೆಲವಾರು ಪ್ರಾಮುಖ್ಯ ಸ್ಥಳಗಳಲ್ಲಿ ಶಾಶ್ವತ ಹಾಗೂ ಅರೆಶಾಶ್ವತ ರಂಗಮಂದಿರಗಳನ್ನು ನಿರ್ಮಿಸುವ ಯೋಜನೆಯೊಂದು ಸರ್ಕಾರದಲ್ಲಿ ಬಹುದಿನಗಳಿಂದ ಹಾಗೇ ಕೊಳೆಯುತ್ತಲೇ ಇದೆ. ಅರೆವೃತ್ತಿರಂಗಭೂಮಿ ಹಾಗೂ ಹವ್ಯಾಸಿ ರಂಗಭೂಮಿಗೆ ಕಾಯಕಲ್ಪ ನೀಡುವ ಹೊಸ ಯೋಜನೆಯೊಂದು ಇಂದಿನ ತುರ್ತು ಅವಶ್ಯಕತೆಯಾಗಿದೆ.

ಎಲ್ಲದಕ್ಕಿಂತ ಮುಖ್ಯವಾಗಿ ನಮ್ಮ ಸಂಸ್ಕೃತಿಗೆ ಎರಗಬಹುದಾದ ಅಪಾಯಗಳ ಬಗ್ಗೆ ನಾವು ಜಾಗೃತರಾಗಿ ಅದನ್ನು ಎದುರಿಸಲು ಬೇಕಾದ ಒಂದು ಸಮಗ್ರ ಹಾಗೂ ಪರ್ಯಾಯ ಸಾಂಸ್ಕೃತಿಕ ನೀತಿಯನ್ನು ರೂಪಿಸುವುದು ಅತ್ಯಗತ್ಯ. ಇಂದು ಇಡೀ ವಿಶ್ವವೇ ಸರಕು ಸಂಸ್ಕೃತಿಯ ಧಾಳಿಗೆ ತುತ್ತಾಗಿರುವ ಸಂದರ್ಭದಲ್ಲಿ ಭಾರತವೂ ಅದಕ್ಕೆ ಹೊರತಲ್ಲ. ಪ್ರಬಲ ಸಮೂಹ ಮಾಧ್ಯಮಗಳನ್ನು ಕೈವಶ ಮಾಡಿಕೊಂಡಿರುವ ಸರಕು ಸಂಸ್ಕೃತಿಯ ಧಾಳಿಯಿಂದ ನಮ್ಮ ನೈಜ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳುವುದು ಸುಲಭದ ಕೆಲಸವೇನೂ ಅಲ್ಲ. ನಮ್ಮ ಸಂಗೀತ, ನೃತ್ಯ, ನಾಟಕಗಳೆಲ್ಲ ಕೇವಲ ಮಾರಾಟದ ಸರಕುಗಳಾಗಿಬಿಡುವ ಹಾಗೂ ಇವುಗಳಲ್ಲಿ ಯಾವುದು ಶ್ರೇಷ್ಠ ಎಂಬುದನ್ನು ತಂಬಾಕು ಕಂಪೆನಿಗಳು, ಹೆಂಡದ ದೊರೆಗಳು ನಿರ್ಧರಿಸುವ ಕಾಲ ದೂರವಿಲ್ಲ. ಇದಕ್ಕಾಗಿಯೇ ಒಂದು ಪರಿಣಿತ ದಳ್ಳಾಳಿ ವರ್ಗ ಕೂಡ ಈಗ ಸೃಷ್ಟಿಯಾಗಿದೆ. ಹಿಂದಿರುವ ಸೃಜನಶೀಲತೆ ಮಾಯವಾಗಿ ಎಲ್ಲ ಕಲೆಗಳು ಕಲಾವಿದರು ಬೆಲೆ ಪಟ್ಟಿಯನ್ನು ಹೊತ್ತ ವಸ್ತುಗಳಾಗಿಬಿಡುವ ಸ್ಥಿತಿಯಕಡೆ ನಾವು ದಾಪುಗಾಲಿಡುತ್ತಿದ್ದೇವೆ.

ಈಗ ಭಾಷೆ ಹಾಗೂ ಸಂಸ್ಕೃತಿಯ ಕೆಲಸಕ್ಕೆ ಬೇರೆ ಸಾಂಸ್ಥಿಕ ಘಟಕಗಳ ಜತೆ, ಅಥವಾ ಅವುಗಳ ತಲೆಯ ಮೇಲೆ ಸರ್ಕಾರದ ಇಲಾಖೆಯೂ ಇದೆ. ಆದರೆ ಈವರೆಗೂ ಒಂದು ಸಮಗ್ರ ಸಾಂಸ್ಕೃತಿಕ ನೀತಿ ನಮಗೆ ಸಾಧ್ಯವಾಗಿಲ್ಲ. ನಮ್ಮೂರಿನ ಹತ್ತಿರದ ಶಿಕಾರಿಪುರದಲ್ಲಿ ಹುಚ್ಚರಾಯಸ್ವಾಮಿಯ ರಥೋತ್ಸವ ನಡೆಯುತ್ತದೆ. ಹತ್ತಾರು ಹಳ್ಳಿಯವರಿಗೆ ರಥ ಎಳೆಯುವ ಹಕ್ಕಿದ್ದು ಅವರು ಅವರವರ ಅನುಕೂಲದ ಸಮಯ ನೋಡಿ ಬಂದು ತಮಗೆ ಬೇಕಾದ ಕಡೆ ರಥ ಎಳೆದಿಡುತ್ತಾರೆ. ರಥ ಎಂದು ನೆಲೆ ನಿಲ್ಲುತ್ತದೆಯೆಂಬುದು ಸ್ವತಃ ಹುಚ್ಚರಾಯ ಸ್ವಾಮಿಗೂ ತಿಳಿಯುವುದು ಸಾಧ್ಯವಿಲ್ಲ. ನಮ್ಮ ಸಾಂಸ್ಕೃತಿಕ ನೀತಿಯ ಪರಿಸ್ಥಿತಿಯೂ ಈ ತೇರಿನಂತೆಯೇ ಆಗಿದೆ. ನಾವಿನ್ನೂ ನಾನಾ ಮಾದರಿಗಳನ್ನು ಹುಡುಕುತ್ತಾ ಕಲಸು ಮೇಲೋಗರಗಳನ್ನು ಪ್ರಯೋಗ

ಮಾಡುತ್ತಾ ಯಾವುದೋ ನಿರ್ದಿಷ್ಟ ಗೊತ್ತುಗುರಿಗಳಿಲ್ಲದೆ ಎತ್ತ ಎಳೆದರತ್ತ ಕಡೆ ಸಾಗಿ ಹೋಗುತ್ತಿದ್ದೇವೆ.

ಈ ಬಗ್ಗೆ ಯೋಚಿಸಿದಾಗಲೆಲ್ಲ ನನಗೆ ಪ್ರತಿಷ್ಠಿತ ಮ್ಯಾಗಸ್ಸೆ ಪ್ರಶಸ್ತಿ ಪಡೆದ ಶ್ರೀ ಕೆ.ವಿ.ಸುಬ್ಬಣ್ಣನವರ ನೇತೃತ್ವದಲ್ಲಿರುವ ಹೆಗ್ಗೋಡಿನ 'ನೀನಾಸಂ' ಪದೇ ಪದೇ ನೆನಪಿಗೆ ಬರುತ್ತದೆ. ಜಗತ್ತಿನ ಗಮನ ಸೆಳೆಯಬಲ್ಲ ಸಾಂಸ್ಕೃತಿಕ ಚಟುವಟಿಕೆಗಳಿಗೆ ಇರುವ ನಿಜವಾದ ಅಗತ್ಯಗಳು ಎಷ್ಟು ಸರಳ ಎಂಬುದನ್ನು ನಾವಲ್ಲಿ ನೋಡಬಹುದು. ಸಂಸ್ಥೆಗಳೆಂದರೆ ಭಾರೀ ಕಟ್ಟಡಗಳು,ದುಬಾರಿ ಟಿ.ಎ., ಡಿ.ಎ ಹಾಗೂ ನಿರ್ವಹಣಾ ವೆಚ್ಚಗಳು ದೊಡ್ಡ ದೊಡ್ಡ ಅಂಕೆ ಸಂಖ್ಯೆಗಳೆಂದೇ ಭ್ರಮಿಸಿರುವ ಇಲಾಖಾ ಮನಸ್ಥಿತಿಗೂ, ಅಲ್ಲಿರುವ ವಸ್ತುಸ್ಥಿತಿಗೂ ಇರುವ ವ್ಯತ್ಯಾಸ ನಮ್ಮ ಕಣ್ಣು ತೆರೆಸಬೇಕು. ಹೆಗ್ಗೋಡಿನ ನೀನಾಸಂನಿಂದಾಗಿ ಸುತ್ತಮುತ್ತಲಿನ ಗ್ರಾಮೀಣ ಜನರಿಗೆ ರಾಷ್ಟ್ರ ಅಂತಾರಾಷ್ಟ್ರೀಯ ಖ್ಯಾತಿಯ ಸಾಹಿತಿಗಳು, ಕವಿಗಳು,ನಾಟಕಕಾರರು, ಚಲನಚಿತ್ರ ದಿಗ್ದರ್ಶಕರು ಮುಂತಾದ ಹಲವರ ಆತ್ಮೀಯ ಪರಿಚಯವಾಗಿದೆ. ಪ್ರಪಂಚದ ಅತ್ಯಂತ ಮಹತ್ವದ ನಾಟಕಗಳನ್ನು ಮೌಲಿಕವಾದ ಚಲನಚಿತ್ರಗಳನ್ನು ತಮ್ಮ ಮನೆ ಬಾಗಿಲಿನಲ್ಲೇ ಅವರು ನೋಡಿದ್ದಾರೆ. ಅತ್ಯಂತ ಮಹತ್ವಪೂರ್ಣ ಚರ್ಚೆಗಳನ್ನು, ಉಪನ್ಯಾಸಗಳನ್ನು ಕೇಳಿ, ಅದರಲ್ಲಿ ತಮ್ಮದೇ ಆದ ರೀತಿಯಲ್ಲಿ ಭಾಗಿಗಳಾಗಿ ಸ್ಪಂದಿಸಿ ಆಧುನಿಕತೆಯ ಸತ್ಯಕ್ಕೆ ತಮ್ಮನ್ನು ತಾವೇ ತೆರೆದುಕೊಂಡಿದ್ದಾರೆ. ಬೆಂಗಳೂರು,ಮೈಸೂರುಗಳಂತಹ ನಗರಗಳಲ್ಲಿರುವ ಜನರಿಗೆ ಗೊತ್ತಿರದಷ್ಟು ವಿಚಾರಗಳ, ವ್ಯಕ್ತಿ ಹಾಗೂ ಸಂಸ್ಥೆಗಳ ಜತೆ ಅವರು ಆತ್ಮೀಯವಾಗಿ ಒಡನಾಡಿದ್ದಾರೆ. ಸ್ವಾತಂತ್ರ್ಯನಂತರದ ಭಾರತದಲ್ಲಿ ನಮ್ಮ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಸಂಸ್ಕೃತಿ ಹಾಗೂ ಕಲೆಗೆ ಸಂಬಂಧಿಸಿದಂತೆ ಯೋಜನೆಗಳನ್ನು ರೂಪಿಸಿಲ್ಲವೆಂದೇನೂ ಅಲ್ಲ. ಸಾಕಷ್ಟು ಹಣ ಖರ್ಚಾಗಿರುವುದೂ ನಿಜ. ಆದರೆ ಅವುಗಳೆಲ್ಲದರ ನಿವ್ವಳ ಪರಿಣಾಮ ಏನಾಗಿದೆ ಎಂಬುದೇ ನಮಗೆ ಮುಖ್ಯ. ಕಟ್ಟಡಗಳ ಸಂಖ್ಯೆ, ಅವುಗಳಿಗೆ ತಗುಲಿದ ದುಬಾರಿ ವೆಚ್ಚ, ಸೃಷ್ಟಿಸಿದ ಕುರ್ಚಿಗಳ ಸಂಖ್ಯೆ, ಟಿ.ಎ., ಡಿ.ಎ ಗ್ರಾಂಟುಗಳು ಈ ಅಂಕೆ ಸಂಖ್ಯೆಗಳ ಮೂಲಕ ನಮ್ಮ ಸಾಂಸ್ಕೃತಿಕ ಪ್ರಗತಿಯನ್ನು ಮಾಪನ ಮಾಡಿ ತೃಪ್ತಿಪಟ್ಟುಕೊಳ್ಳುವುದರಲ್ಲಿ ಏನೇನೂ ತಾತ್ಪರ್ಯವಿಲ್ಲ. ಸಾರ್ಥಕವಾದದ್ದು ಏನು ಸಾಧನೆಯಾಯಿತು ಹಾಗೂ ಜನರಿಗೆ ಅದರಿಂದೇನು ಸಿಕ್ಕಿತು ಎಂಬುದೇ ನಮ್ಮ ಕೇಂದ್ರ ಲಕ್ಷ್ಯವಾಗಿರಬೇಕು. ನೀನಾಸಂದಂತಹ ಒಂದು ಸಂಸ್ಥೆಯ ಹಲವು ಚಟುವಟಿಕೆಗಳಿಂದಾಗಿ ಹೆಗ್ಗೋಡಿನ ಸುತ್ತಮುತ್ತಲ ಜನಸಾಮಾನ್ಯರಿಗೆ, ಅಲ್ಲದೇ ಹತ್ತಿರವೇ ಇರುವ ಸಾಗರದ ಪೇಟೆಯ ಜನರಿಗೆ ಇಂದು ಏನೆಲ್ಲ ಲಭ್ಯವಾಗಿದೆಯೋ ಅಂಥದ್ದು ನಮ್ಮ ಸರ್ಕಾರಗಳ ನೀತಿ, ಕಾರ್ಯಕ್ರಮ,

ಯೋಜನೆ. ಹಾಗೂ ಗ್ರ್ಯಾಂಟುಗಳಿಂದಾಗಿ ಎಷ್ಟು ಕಡೆಯಲ್ಲಿ ಜನಸಾಮಾನ್ಯರಿಗೆ ಲಭ್ಯವಾಗಿದೇ ಎಂಬುದೇ ನಾವೀಗ ನೇರವಾಗಿ ನಮ್ಮನ್ನೇ ಕೇಳಿಕೊಳ್ಳಬೇಕಾದ ಪ್ರಶ್ನೆ. ಸಂಸ್ಥೆಗಳೆಂದರೆ ಕಟ್ಟಡಗಳಲ್ಲ, ಅವು ಜೀವಂತ ಪರಂಪರೆಯೆಂಬುದನ್ನು ನಮ್ಮ ಸರ್ಕಾರಿ ಇಲಾಖೆಗಳು ಮೊದಲು ಅರ್ಥಮಾಡಿಕೊಳ್ಳಬೇಕು. ಯಾವುದೇ ಪರಂಪರೆಯನ್ನು ದಿಢೀರನೆ ೪-೫ ತಿಂಗಳಲ್ಲಿ ಸ್ಥಾಪಿಸುವುದು ಸಾಧ್ಯವಿಲ್ಲ. ಕಟ್ಟಡಗಳನ್ನು ಕಟ್ಟಿಬಿಡಬಹುದು. ಮೊದಲು ನಮ್ಮ ಪರಂಪರೆಯಲ್ಲಿ ಉತ್ಕೃಷ್ಟವಾದದ್ದನ್ನು ಉಳಿಸಿಕೊಳ್ಳಲು ಕಲಿಯಬೇಕು. ಬೆಳೆಸುವ ಮಾತು ನಂತರ. ಹಿಂದೆ ನಮ್ಮಲ್ಲಿ ಸ್ನಾತಕೋತ್ತರ ಶಿಕ್ಷಣ. ಡಾಕ್ಟರೇಟ್ ಪದವಿಯವರೆಗೂ ಶಿಕ್ಷಣ ಸೌಲಭ್ಯಗಳಿದ್ದ ಎರಡು ಕಾಲೇಜುಗಳಿದ್ದವು.ಮೈಸೂರಿನ ಮಹಾರಾಜಾ ಕಾಲೇಜು ಹಾಗೂ ಬೆಂಗಳೂರಿನ ಸೆಂಟ್ರಲ್ ಕಾಲೇಜು. ಈ ಸಂಸ್ಥೆಗಳಿಗೆ ಹಲವಾರು ದಶಕಗಳ ಭವ್ಯ ಪರಂಪರೆಯಿತ್ತು. ವಿಶ್ವವಿದ್ಯಾಲಯದ ಸ್ಥಾನಮಾನಗಳನ್ನು ನೀಡಿ ಅವುಗಳನ್ನುಳಿಸಿ ಬೆಳೆಸಿದ್ದರೆ, ಅವು ಅಂತಾರಾಷ್ಟ್ರೀಯ ಮನ್ನಣೆಗೆ ಪಾತ್ರವಾಗುವ ಹೆಮ್ಮೆಯ ಸಂಸ್ಥೆಗಳಾಗುತ್ತಿದ್ದವು. ಈ ಸಂಸ್ಥೆಗಳಿಗೆ ಒದಗಿದ ದುರವಸ್ಥೆ ನಮಗೆ ಪರಂಪರೆಯ ಬಗ್ಗೆ ಇರುವ ತಾತ್ಸಾರಕ್ಕೆ ನಿದರ್ಶನ.

ಇಂದಿನ ಈ ಮಹಾಧಿವೇಶನದ ಚರ್ಚಾ ವಿಷಯವನ್ನು ಎರಡು ಭಾಗ ಮಾಡಲಾಗಿದೆ. ಪ್ರಗತಿಯ ಸ್ವರೂಪ ಹಾಗೂ ಸಾಂಸ್ಕೃತಿಕ ಸ್ವರೂಪ. ನಿಜವೆಂದರೆ ಇವೆರಡು ಒಂದರೊಳಗೊಂದು ಬಿಡಿಸಬರದಂತೆ ಹೆಣೆದುಕೊಂಡಿರುವ, ಹೆಣೆದುಕೊಂಡಿರಲೇಬೇಕಾದ ಅಂಶಗಳು. ನಮ್ಮ ಪ್ರಗತಿಯ ಸ್ವರೂಪ ಸಂಸ್ಕೃತಿಯ ಮೇಲೆ ಗಂಭೀರ ಪರಿಣಾಮ ಬೀರುತ್ತದೆ. ಅಂತೆಯೇ ನಮ್ಮ ಸಾಂಸ್ಕೃತಿಕ ಕಾಳಜಿಗಳೇ ಪ್ರಗತಿಯ ಸ್ವರೂಪವನ್ನು ನಿರ್ದೇಶಿಸುವಂತಿರಬೇಕಾದದ್ದು ಅತ್ಯವಶ್ಯಕ. ಪ್ರಾಯಶ: ಇವೆರಡರ ಮಧ್ಯೆ ಇರಲೇಬೇಕಾದ ಅನ್ಯೋನ್ಯತೆ ಕಡಿದು ಹೋಗುತ್ತಿರುವುದೇ ನಮ್ಮ ಇಂದಿನ ದೊಡ್ಡ ದುರಂತ.

ನನ್ನ ದೃಷ್ಟಿಯಲ್ಲಿ ಸಂಸ್ಕೃತಿಯೆಂದರೆ ಎಲ್ಲೋ ಕೆಲವು ಕಡೆಯಲ್ಲಿ ಹೆಪ್ಪುಗಟ್ಟಿರುವ ಕೆನೆಯಲ್ಲ. ಕೆಲವೇ ಕೆಲವು ದಂತದ ಗೋಪುರಗಳಲ್ಲ. ಬದಲು ವಿಶಾಲ ಜನಜೀವನದ ಎಲ್ಲ ಮಗ್ಗುಲಗಳಲ್ಲೂ ಹಾಸು ಹೊಕ್ಕಾಗಿ ಹೊರಹೊಮ್ಮುವ ಜೀವನಧರ್ಮ. ನನ್ನ ಕಲ್ಪನೆಯ ಸಂಸ್ಕೃತಿ ಸರ್ಕಾರಿ ಉತ್ಸವಗಳಲ್ಲಿ ಕಾಣುವ ವಸ್ತು ಸಂಗ್ರಹಾಲಯದ ವಿಶೇಷಗಳಲ್ಲ. ಭವ್ಯ ರಂಗಮಂದಿರಗಳಲ್ಲಿ ಕನಿಷ್ಠ ನೂರು ರೂಪಾಯಿ ಟಿಕೆಟ್‌ಗೆ ಕೊಂಡುಕೊಳ್ಳುವ ವಸ್ತುವಲ್ಲ. ದಾರಿಯಲ್ಲಿ, ಬಸ್ಸಿನಲ್ಲಿ, ಹೋಟೆಲಿನಲ್ಲಿ, ಟ್ಯಾಕ್ಸಿಯಲ್ಲಿ, ಟಿ.ವಿಯಲ್ಲಿ. ಸಿನೆಮಾದಲ್ಲಿ ಸುತ್ತಮುತ್ತ ಎತ್ತ ನೋಡಿದರು ದಕ್ಕುವ ಅಪ್ಪಟ

ಜೀವನಾನುಭವಕ್ಕೆ ಸಂಬಂಧಿಸಿದ್ದು. ನಮ್ಮ ಇಡೀ ಜನ ಸಮುದಾಯವನ್ನು ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳನ್ನಾಗಿ ಮಾಡುವ, ಚಾಗದ ಭೋಗದ ಅಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳಿಗೆ ಆಗರಮಾದ ಮನುಷ್ಯರನ್ನಾಗಿ ಪರಿವರ್ತಿಸಬಲ್ಲ ಒಂದು ವ್ಯಾಪಕ ಜನಾಂದೋಳನಕ್ಕೆ ಸಂಬಂಧಿಸಿದ್ದು. ಒಂದು ಕಡೆ ಅನ್ನದನ್ಯಾಯದಾವಾಗ್ನಿಯಲಿ, ನರತೆ ಸಂಸ್ಕೃತಿ ದಿನದ ಬಯಕೆಗಳನ್ನು ನರಳಿಸುತ್ತಾ, ಇನ್ನೊಂದೆಡೆ ಸಂಸ್ಕೃತಿಯ ಮಹಾನ್ ಸೌಧಗಳನ್ನು ನಿರ್ಮಾಣ ಮಾಡುವುದರಲ್ಲಿ ನನಗೆ ವಿಶ್ವಾಸವಿಲ್ಲ. ಆರ್ಥಿಕ ಉದಾರೀಕರಣದ ಪರಿಣಾಮಗಳು, ಸರಕು ಸಂಸ್ಕೃತಿ, ಕಳಪೆ ಸಿನೆಮಾ ಸಂಸ್ಕೃತಿ, ಸಮೂಹ ಮಾಧ್ಯಮಗಳು, ಮತೀಯ ಮೂಲಭೂತವಾದ, ಚಿಲ್ಲರೆ ರಾಜಕಾರಣ ಇವುಗಳೆಲ್ಲದರ ಒಟ್ಟು ದಾಳಿಯಿಂದ ನಮ್ಮ ಸಾಂಸ್ಕೃತಿಕ ಜಗತ್ತನ್ನು ರಕ್ಷಿಸಿಕೊಳ್ಳುವ ಸ್ಥಿತಿ ಸಾಧ್ಯವೇ ಎಂದು ನನ್ನ ಮನಸ್ಸು ಆತಂಕಗೊಂಡಿದೆ. ನಮ್ಮ ಆರ್ಥಿಕ ಉದಾರೀಕರಣ ಅಂತಿಮವಾಗಿ ಇಡೀ ದೇಶವನ್ನೇ ಈಗಿರುವ ಮುಂಬಯಿ ಕಲಕತ್ತಾಗಳಂತೆ ಒಂದೆಡೆ ಅಪಾರ ಶ್ರೀಮಂತಿಕೆಯ ಬಹುಮಹಡಿಕಟ್ಟಡಗಳ ಪಟ್ಟಿಗಳ, ಇನ್ನೊಂದೆಡೆ ಜೋಪಡಿ ನಾಡನ್ನಾಗಿ ಶಾಶ್ವತವಾಗಿ ವಿಂಗಡಿಸಿ ಬಿಟ್ಟರೆ, ಆಗ 'ಯಾವ ಹಾಡ ಹಾಡಲಿ' ಎಂದು ಮನಸ್ಸು ಚಡಪಡಿಸುತ್ತದೆ. "ಇರುವುದೆಲ್ಲವನು ಎಲ್ಲ ಜನಕೆ ತೆರವಾಗಿಸುವ ಸಮಬಗೆಯ ಸಮಸುಖದ ಸಮದುಃಖದ ಸಾಮರಸ್ಯದ ಸಾಮಗಾನ ಲಹರಿಯ ಮೇಲೆ ತೇಲಿ ಬರುತಿರೆ ನೋಡು ನಮ್ಮ ನಾಡು" - ಕವಿಕಲ್ಪನೆಯ ಅಂಥ ನಾಡೊಂದನ್ನು-ರಸದ ಬೀಡೊಂದನ್ನು ಕಟ್ಟುವ ದಾರಿ ತಪ್ಪಿ ತದ್ವಿರುದ್ಧ ದಿಕ್ಕಿನಲ್ಲಿ ಈಗಾಗಲೇ ಬಹು ದೂರ ಹೋಗಿಬಿಟ್ಟಿದ್ದೇವೆ. ಮುಂದೇನೆಂದು ಈಗಲಾದರೂ ಯೋಜಿಸಿ ತಪ್ಪಿಹೋದ ದಾರಿಯನ್ನು ಓಡಿಹೋಗಿ ತಿದ್ದಿಕೊಳ್ಳಬೇಕು. ಕುರುಡು ಕಾಂಚಾಣದ ಕಬಿಮುಷ್ಟಿಯಲ್ಲಿ ಸಿಕ್ಕಿರುವ ಸರಕು ಸಂಸ್ಕೃತಿ ಎಲ್ಲವನ್ನು ತ್ವರಿತವಾಗಿ ಆಕ್ರಮಿಸುತ್ತಿರುವ ಈ ಒಟ್ಟಿನ ಜನಜೀವನದ ಸಂದರ್ಭದಲ್ಲಿ "ಹೆಳವನ ಹೆಗಲ ಮೇಲೆ ಕುರುಡ ಕೂತಿದ್ದಾನೆ; ದಾರಿ ಸಾಗುವುದೆಂತೋ ಕಾದು ನೋಡಬೇಕು".

# ಕಾಡಿನ ಸಂಸ್ಕೃತಿಯೂ ಕಾಂಕ್ರೀಟ್ ಸಂಸ್ಕೃತಿಯೂ

**ಪ್ರೊ. ಹಿ. ಚಿ. ಬೋರಲಿಂಗಯ್ಯ**

'ಕಾಡು ಉಳಿಸಿ ನಾಡು ಬೆಳೆಸಿ' ಎಂಬ ಘೋಷಣೆಯ ಹಿನ್ನೆಲೆಯಲ್ಲಿ ಕಾಡು ಏಕೆ ನಾಶವಾಯಿತು ಎಂಬ ವಿವೇಚನೆ ಇಲ್ಲವಾಗಿದೆ. ಕಾಡನ್ನು ಕಾಪಾಡುವ ಮತ್ತು ಬೆಳೆಸುವ ಹೊಣೆಯನ್ನು ಯಾವಾಗ ಸರ್ಕಾರ ವಹಿಸಿಕೊಂಡಿತೋ ಅಂದೇ ಕಾಡಿಗೆ ಒಳ್ಳೆಯ 'ದೆಸೆ' ಇಲ್ಲ ಎಂಬ ಅನುಮಾನ ಹುಟ್ಟುವ ವ್ಯವಸ್ಥೆ ನಮ್ಮಲ್ಲಿ ನಿಸ್ಸಂದೇಹವಾಗಿ ಬೇರು ಬಿಟ್ಟಿದೆ. ಅರಣ್ಯಗಳಿಗೆ ದಾವಾಗ್ನಿಯಂತೆ ಅಮರಿಕೊಳ್ಳುತ್ತಿರುವ ಲೂಟಿಕೋರರೇ ಮತ್ತೊಂದು ಪೋಷಾಕಿನಲ್ಲಿ ಕಾಡು ಉಳಿಸುವ ಬೆಳೆಸುವ ಉಪದೇಶ ನೀಡುತ್ತಿರುವುದು ಇಲ್ಲಿನ ವಿಪರ್ಯಾಸ.

ಆದರೆ ಕಾಡನ್ನು ಪ್ರೀತಿಸುವ ಹಾಗೂ ಅದರ ಸೌಂದರ್ಯಕ್ಕೆ ತಲೆದೂಗುವ ನಿರ್ಮಲ ಅಭೀಪ್ಸೆ ನೂರರಲ್ಲಿ ತೊಂಭತ್ತರಷ್ಟು ಜನಕ್ಕಾದರೂ ಇರುತ್ತದೆ. ಈ ಅಭೀಪ್ಸೆ ನಿಜವಾಗುವ ಸಾಧ್ಯತೆಯನ್ನು ನಮ್ಮ ಕಾಂಕ್ರಿಟ್ ಸಂಸ್ಕೃತಿ ತಡೆಗಟ್ಟುತ್ತದೆ. ಅಂದರೆ ಒಟ್ಟಾರೆ ಜನಸಮುದಾಯ ಬಯಸುವ ಇಂಥ ಮಾನಸಿಕ ವಿಚಾರಗಳನ್ನು ವ್ಯವಸ್ಥೆಯಲ್ಲಿ ಕಡೆಗಣಿಸುವ ಮೂಲಕ ಅವರನ್ನು ಅಸಹಾಯಕಗೊಳಿಸಲಾಗುತ್ತದೆ. ಇಲ್ಲಿ ಎರಡು ವಿಚಾರಗಳು ಮುಖ್ಯವಾಗುತ್ತವೆ. ನಾವೇ ಪೋಷಿಸಿಕೊಂಡು ಬಂದ ವ್ಯವಸ್ಥೆ ಇಂಥ ಅಸಹಾಯಕತೆಗೆ ನಮ್ಮನ್ನು ತಳ್ಳುವುದು ಒಂದನೆಯದಾದರೆ, ಆಧುನಿಕತೆಯ ಹೆಸರಿನ ಹಲವು ಸೌಲಭ್ಯಗಳನ್ನು ಪಡೆಯುವ ಭರದಲ್ಲಿ ಸ್ವತಃ ವಿವೇಚನೆಯಿಲ್ಲದಿರುವ ಮಾನಸಿಕ ದೌರ್ಬಲ್ಯ ಎರಡನೆಯದು. ಅನುಭವಿಸುವ ಸಂಸ್ಕೃತಿಗಿಂತ ತೋರಿಕೆಯ ಸಂಸ್ಕೃತಿ ಪ್ರಧಾನ ಪಾತ್ರವಹಿಸುತ್ತಿರುವ ಈ ಸಂದರ್ಭದಲ್ಲಿ ಕೆಲವೇ ಮನಸ್ಸುಗಳ ದೌರ್ಬಲ್ಯ ಸಾಮಾಜಿಕ ದೌರ್ಬಲ್ಯವಾಗಿ ಪರಿವರ್ತಿತವಾಗುವ ಮಟ್ಟಿಗೆ 'ಆಧುನಿಕತೆ' ನಮ್ಮನ್ನು ಸೆಳೆಯುತ್ತಿದೆ.

ಈ ಮೇಲಿನ ಮಾತಿನ ಅರ್ಥವನ್ನು ಕೆಲವು ಉದಾಹರಣೆಗಳ ಮೂಲಕ ವಿಷದಪಡಿಸುವ ಹಂಬಲ ನನ್ನದು. ಮೊದಲ ಉದಾಹರಣೆಯನ್ನು ನಮ್ಮ ಊರಿಂದಲೇ ಆರಂಭಿಸುತ್ತೇನೆ. ತುಮಕೂರು ಜಿಲ್ಲೆ ಕುಣಿಗಲ್ ತಾಲೂಕಿನ ಪುಟ್ಟಹಳ್ಳಿ ನನ್ನದು.

ಸುತ್ತಲ ಏಳು ಹಳ್ಳಿಗಳಿಗೆ 'ಚೌಡಮ್ಮ' ಹೆಸರಾದ ಗ್ರಾಮದೇವತೆ. ವರ್ಷಕ್ಕೊಮ್ಮೆ ಅವಳ ಹಬ್ಬ. ನಾನು ಚಿಕ್ಕ ಹುಡುಗನಾಗಿದ್ದಾಗ ಕಂಡಂತೆ ಅದೊಂದು ಸರಳ ನಿರಾಡಂಬರ ಆಚರಣೆ. ಒಟ್ಟು ಐದು ದಿನಗಳ ಕಾಲ ನಡೆಯುತ್ತಿದ್ದ ಆ ಹಬ್ಬದಲ್ಲಿ ಏಳೂರಿನ ಜನರಲ್ಲದೆ ಅವರೆಲ್ಲರ ನೆಂಟರು ಇಷ್ಟರೂ ಸೇರಿದಂತೆ ಸಾವಿರಾರು ಜನ ಸೇರುತ್ತಿದ್ದರು. ಆರತಿ, ಮಡೆ, ಕೊಂಡ, ಬಾಯಿಬೀಗ, ತೇರು, ಪಲ್ಲಕ್ಕಿ ಇತ್ಯಾದಿ ಸಂಪ್ರದಾಯಗಳ ಪಾಲನೆಯ ಜೊತೆಗೆ ಬಣ್ಣದ ಬತ್ತಾಸಿನ, ಸಿಹಿ ತಿಂಡಿಗಳ ಬಟ್ಟೆಬರೆಬಳೆಗಳ ಜಾತ್ರೆ ಮುದ ನೀಡುತ್ತಿತ್ತು. ನಮ್ಮ ಈ ಎಲ್ಲ ಹಳ್ಳಿಗಳು ಬೆಂಗಳೂರಿನಿಂದ ಕೇವಲ ೮೦ ಕಿ.ಮೀ ಹತ್ತಿರದಲ್ಲೇ ಇದ್ದುದರಿಂದಾಗಿ ಕೆಲಸ ಅರಸಿಕೊಂಡು ಬೆಂಗಳೂರು ಕಡೆ ಹಲವು ಜನ ಹೊರಟದ್ದು ಸಹಜವೇ ಆಗಿತ್ತು. ಬೆಂಗಳೂರಿನ ರಾಜಾಮಿಲ್, ಮಿನರ್ವಾಮಿಲ್, ಬಿನ್ನಿಮಿಲ್‌ಗಳಂಥ ಆಗಿನ ಗಿರಣಿಗಳಲ್ಲದೆ ಅದಾಗ ಬಂದು ಬೇರೂರುತ್ತಿದ್ದ ಕಿರ್ಲೋಸ್ಕರ್, ರೆಂಕೋ, ಅಮ್ಕೋ ಇಂಥ ಕಾರ್ಖಾನೆಗಳಿಗೂ ಒಂದಷ್ಟು ಜನ ಸೇರಿದರು. ಬೆಂಗಳೂರಿನಾದ್ಯಂತ ತೆರೆಯಲಾಗಿದ್ದ ನೂರಾರು ಸೌದೆ ಡಿಪೋಗಳಲ್ಲಿ ನಮ್ಮವರೇ ಕೆಲಸ ಮಾಡುತ್ತಿದ್ದರು. ಕೇಂದ್ರ ಸರ್ಕಾರಿ ಸ್ವಾಮ್ಯದ ಕಾರ್ಖಾನೆಗಳಲ್ಲಿ ನಮ್ಮವರಿಗೆ ಕೆಲಸ ಸಿಗುತ್ತಿರಲಿಲ್ಲ ಎಂಬ ಮಾತು ಬೇರೆ. ಆದರೆ ಬೆಂಗಳೂರಿಗೆ ಹೋದ ತಕ್ಷಣ ನಮ್ಮ ಹುಡುಗರಿಗೆ ಸಿಗುತ್ತಿದ್ದ ತತ್ಕಾಲದ ಕೆಲಸವೆಂದರೆ ಹೋಟೆಲ್ ಕ್ಲೀನರ್. ಹೀಗಾಗಿ ನಮ್ಮ ಹಳ್ಳಿಗಳ ಪ್ರತಿ ಮನೆಯ ಒಬ್ಬನಾದರೂ ಹುಡುಗ ಬೆಂಗಳೂರು ಸೇರಿದ್ದು ನಿಜ. ಹೀಗೆ ಬೆಂಗಳೂರು ಸೇರಿದ ಜನ ತಪ್ಪದೇ ಬರುತ್ತಿದ್ದ ಹಬ್ಬವೆಂದರೆ ಚೌಡಮ್ಮನ ಹಬ್ಬವೇ. ಬೆಂಗಳೂರು ಪ್ರಭಾವದಿಂದಾಗ ನಾನು ನೋಡುನೋಡುತ್ತಿದ್ದಂತೆ ಹಬ್ಬಕ್ಕೆ ಬರುತ್ತಿದ್ದ ಜನರ ಪೋಷಾಕು ಬದಲಾವಣೆ ಆಗತೊಡಗಿತು. ಟೆರಿಲಿನ್, ಟೆರಿಕಾಟ್, ಬಟ್ಟೆಗಳ ನೇರ ಇಸ್ತ್ರಿ ಮಾಡಿದ ಷರಟು ಪ್ಯಾಂಟುಗಳಲ್ಲದೆ ಬೇಸಿಗೆಯಲ್ಲೂ ಕರಿಸೂಟು ಮತ್ತು ಟೈ ಕಟ್ಟಿದ ಜನ ಕಪ್ಪು ಕನ್ನಡಕದೊಡನೆಯೇ ಕಾಣಿಸಿಕೊಳ್ಳತೊಡಗಿದರು. ಆ ದಿನಗಳಲ್ಲಿ ಹೈಸ್ಕೂಲು ಸೇರುವುದೆಂದರೆ ತುಂಬಾ ಗೌರವದ ವಿಚಾರವಾಗಿತ್ತು. ಏಕೆಂದರೆ ನಮ್ಮ ಹಳ್ಳಿಗೆ ಅದಾಗ ತಾನೇ ತಾಲ್ಲೋಕು ಬೋರ್ಡ್ ಹೈಸ್ಕೂಲು ಬಂದಿತ್ತು. ಆದರೆ ಹೈಸ್ಕೂಲು ಸೇರಿದಾಗ ಸಿಕ್ಕ ಗೌರವ ನಮಗೆ ಬರಬರುತ್ತಾ ಇಲ್ಲವಾಯಿತು. ಏಕೆಂದರೆ ಬೆಂಗಳೂರಲ್ಲಿ ಅಷ್ಟಿಷ್ಟು ದುಡಿಯುತ್ತಾ ಊರಿಗೆ ಬಂದಾಗ ತುಂಬಾ ಟ್ರಿಮ್ಮಾಗಿ ಬರುತ್ತಿದ್ದ ಜನರಿಗೆ ಹೆಚ್ಚು ಗೌರವ ಸಿಗತೊಡಗಿತು. ಬೆಂಗಳೂರಿನಲ್ಲಿ ಕಲುಷಿತಗೊಂಡ ಬಟ್ಲರ್ ಭಾಷೆ ಜನರನ್ನು ದಂಗು ಹೊಡೆಸಿ ಇವನು ನಮಗಿಂತ ವಿಶೇಷ ಎಂಬ ಗೌರವ ಮಿಶ್ರಿತ ಭಾವನೆ ಬೆಳೆಯತೊಡಗಿತು. ನಾಲ್ಕು ಕಿ.ಮೀ ದೂರದ ಹೈಸ್ಕೂಲಿಗೆ ನಡೆಯುವಾಗಲೂ ಚಪ್ಪಲಿ ಭಾಗ್ಯ ಕಾಣದ ನಾವು ಅವರ ಸೂಟು ಬೂಟುಗಳನ್ನು ಕಂಡೇ ಬೆವರತೊಡಗಿದೆವು.

ಒಟ್ಟಾರೆ ಸದ್ದಿಲ್ಲದೆಯೇ ನಮ್ಮ ಹಳ್ಳಿಗಳನ್ನು ಬೆಂಗಳೂರು ಪ್ರವೇಶಿಸತೊಡಗಿತು ಎಂಬ ಮಾತಂತೂ ಸತ್ಯ.

ಅದಿರಲಿ. ನಾನೀಗ ಮತ್ತೆ ಹಬ್ಬದ ಆಚರಣೆಗೆ ಬರುತ್ತೇನೆ. ಚೌಡಮ್ಮನ ಹಬ್ಬದ ಬಹು ಮುಖ್ಯವಾದ ಭಾಗವೆಂದರೆ ಕೊಂಡ. ಅಂದರೆ, ಏಳೂರಿನ ಪ್ರತಿ ಮನೆಯವರೂ ಮಂಗಳವಾರದಂದು ಬೆಳಿಗ್ಗೆ ಮೂರು, ಐದು ಅಥವಾ ಏಳು ಮರದ ತುಂಡುಗಳನ್ನು ಕಟ್ಟಿ ಎತ್ತುಗಳ ನೊಗಕ್ಕೆ ಬಿಗಿದು ಆಯಾ ಊರಿನ ನಿಗದಿಪಡಿಸಲಾದ ಬಯಲಿನಿಂದ ಮೆರವಣಿಗೆಯಲ್ಲಿ ಹೊರಟು ಉಜ್ಜನಿಯ ಚೌಡಮ್ಮನ ಗುಡಿಯ ಮುಂದೆ ಹೊರೆ ಇಳಿಸುವುದು. ಹೀಗೆ ಏಳೂರಿಂದ ಬಂದ ಸೌದೆಗಳನ್ನು ಈಗಾಗಲೇ ಅಗೆದು ತೆಗೆಯಲಾದ ಕೊಂಡದ ಕುಳಿಯ ಮೇಲೆ ಜೋಡಿಸಿ ಅಂದಿನ ಸಂಜೆ, ಹೊತ್ತು ಮುಳುಗುವ ಹೊತ್ತಿಗೆ ಶಾಸ್ತ್ರೋಕ್ತವಾಗಿ ಬೆಂಕಿ ಹೊತ್ತಿಸುವುದು. ನಾನಾ ವಿಧವಾದ ಸೌದೆಗಳು ಧಗಧಗನೆ ಉರಿದು ಸುರಿಯುವ ನಿಗಿನಿಗಿ ಕೆಂಡದ ಮೇಲೆ ದೇವರು, ಕರಗ, ದೂಪುಂಡಿಗೆ ಹಾಗೂ ಹೆಬ್ಬಾರೆ ಹೊತ್ತ ಗುಡ್ಡರು ಓಡುವುದು.ಇದು ಅನಾದಿ ಕಾಲದಿಂದ ನಡೆದುಬಂದ ಆಚರಣೆ ಎಂಬುದು ಇಲ್ಲಿನ ಜನರ ನಂಬಿಕೆ.

ಇಂಥ ಒಂದು ಆಚರಣೆಯ ಮೇಲೆ ಬೆಂಗಳೂರು ಹೇಗೆ ಪ್ರಭಾವ ಬೀರಿತು ಎಂಬುದನ್ನು ಈಗ ನೋಡೋಣ. ಅನ್ನ ಅರಸಿ ಬೆಂಗಳೂರು ಸೇರಿದ ನಮ್ಮೂರಿನ ಒಬ್ಬ ಆಸಾಮಿ ಸೌದೆ ಡಿಪೋದಲ್ಲಿ ಸೌದೆ ಒಡೆಯುವ ಕೆಲಸಕ್ಕೆ ಸೇರಿ ತದನಂತರ ಅಂಥ ನಾಲ್ಕಾರು ಸೌದೆ ಡಿಪೋಗಳ ಮಾಲೀಕನೇ ಆದದ್ದು ಆಶ್ಚರ್ಯವೇನಲ್ಲ. ಆಶ್ಚರ್ಯವಲ್ಲ ಏಕೆಂದರೆ ಈ ಕಾಂಕ್ರಿಟ್ ಸಂಸ್ಕೃತಿಯೇ ಹಾಗೆ. ಸಂಪತ್ತನ್ನು ಒಬ್ಬನ ಕಿಸೆಗೇ ಯಾವಾಗಲೂ ದೂಡುತ್ತದೆ. ಈತ ತನ್ನ ಸಂಪತ್ತನ್ನು ತೋರಿಸಿಕೊಳ್ಳಲು ಹಬ್ಬ ಒಂದು ಒಳ್ಳೆಯ ಸಂದರ್ಭವಾಯಿತು. ಅವನು ಚೌಡಮ್ಮನಲ್ಲಿ ಒಂದು 'ಹರಕೆ' ಹೇಳಿಕೊಂಡ. ಈ ವರ್ಷದ ಕೊಂಡಕ್ಕೆ ಒಂದು ಲಾರಿ ಲೋಡು ಸೌದೆಯನ್ನು ಹಾಕುತ್ತೇನೆ ಎಂಬುದೇ ಆ ಹರಕೆ. ಸರಿ, ಬರೀ ಎತ್ತಿನ ಹೇರುಗಳಲ್ಲಿ ಬರುತ್ತಿದ್ದ ಸೌದೆ ಮೆರವಣಿಗೆಯ ಮುಂಚೂಣಿಯಲ್ಲಿ ಆ ವರ್ಷ ಕಿಕ್ಕಿರಿದು ತುಂಬಿದ ಸೌದೆಗಳಿಂದ ಭರ್ಜರಿಯಾಗಿ ಅಲಂಕೃತಗೊಂಡ ಲಾರಿ! ಮುಂದೆ ಬೆಂಗಳೂರಿಂದಲೇ ಕರೆಸಿದ ಆಧುನಿಕ ಬ್ಯಾಂಡು ಸೆಟ್ಟು, ಎಂಥಾ ಪುಣ್ಯಾತ್ಮನಪ್ಪ ಎಂಬ ಉದ್ಗಾರ. ಇಲ್ಲಿಂದ ನಮ್ಮೂರಿನ ಕಾಡಿಗೂ ದುರ್ದೆಸೆ ಆರಂಭವಾಯಿತು. ಸ್ವತಹ ಊರಿನವರೇ ಬೆಳೆಸಿ ಸಾಕಿದ್ದ ಕಾಡು ಉಳ್ಳವರ ಕೊಡಲಿಗೆ ಆಹಾರವಾಗುತ್ತಾ ಬರಿದಾಗತೊಡಗಿತ್ತು. ಚೌಡಮ್ಮನಿಗೆ ಹರಕೆ ಹೊರುವ ನೆಪದಲ್ಲಿ ವರ್ಷಕ್ಕೆ ಹತ್ತಾರು ಲಾರಿಗಳ ಮೆರವಣಿಗೆ ನಡೆಯಿತು. ನಮ್ಮ ಸುತ್ತಲಿನವನೇ ಆದ ಒಬ್ಬ ಹೋಟೆಲ್ ಮಾಲೀಕ ಒಂದು ಸಲ ಮೂರು ಲಾರಿಗಳಲ್ಲಿ ಸೌದೆ ತಂದು

ಹಾಕಿದ. ಅದು ಬೇರೆಲ್ಲಿಂದಲೂ ತಂದ ಸೌದೆಯಾಗಿರದೆ ಅದೇ ಕಾಡಿನಲ್ಲಿ ನಳನಳಿಸುತ್ತಿದ್ದ ಹಲವು ಜಾತಿಯ ಮರಗಿಡಗಳ ಕಳೇಬರವಾಗಿತ್ತು. ಆದರೆ ಇಂದು ಸುತ್ತಲ ಗುಡ್ಡಬೆಟ್ಟಗಳು ಬಿಸಿಲ ಬೇಗೆ ತಾಳಲಾರದೆ ನರಳುತ್ತಿವೆ. ಬೋಳು ಬೋಳು ನೆಲ ಹೊಗೆಯ ನಿಟ್ಟುಸಿರು ಬಿಡುತ್ತಾ ಬಾಯ್ತೆರೆದು ಕೂತಿದೆ. ಬೆಂಗಳೂರಿನ ಪ್ರಭಾವ ಇಷ್ಟಕ್ಕೇ ನಿಲ್ಲಲಿಲ್ಲ. ರಾಜಕಾರಣಕ್ಕೆ ಇಳಿದು ಬೆಂಗಳೂರು ಪ್ರವೇಶಿದ ಜನ ಹಾಗೂ ವಿಧಾನಸೌಧದಲ್ಲಿ ಅಧಿಕಾರಶಾಹಿಯ ಚುಕ್ಕಾಣಿ ಹಿಡಿದ ಕೆಲವು ಅಧಿಕಾರಿವರ್ಗಕ್ಕೆ ಚೌಡಮ್ಮನ ನೆನಪು ಹೋಗಲು ಸಾಧ್ಯವೇ? ಕಳೆದ ನಾಲ್ಕಾರು ಶತಮಾನಗಳಿಂದ ಅಲುಗಾಡದೆ ನಿಂತಿದ್ದ ಹಳೆಯ ಮಾದರಿಯ ಗುಡಿಯ ಮೇಲೆ ಇವರ ಕಣ್ಣು ಬಿತ್ತು. ಬೆಂಗಳೂರಿನ ರಾಘವೇಂದ್ರ ಮಠಗಳು ಇವರ ಕಣ್ಣಮುಂದೆ ಕುಣಿದಾಡಿದವು. ಚೌಡಮ್ಮನ ಗುಡಿಯೂ ಹಾಗೇ ಕಾಂಕ್ರಿಟ್‌ನಿಂದ ಅರಳಿದ ಬಣ್ಣದ ಹೂವಾಗ ಬೇಕೆಂಬುದು ಅವರ ಆಸೆಯಾಯಿತು. ಸರಿ, ಒಂದು ನಿಧಿಯ ಸ್ಥಾಪನೆಯಾಯಿತು. ಲಕ್ಷಗಟ್ಟಲೆ ಹಣವೂ ಕೂಡಿತು. ಚೌಡಮ್ಮ ಬೆಂಗಳೂರಿಗರ ದೇವತೆಯಾಗಿ ಮಾರ್ಪಾಟಾದಳು. ಕುಂಕುಮಾರ್ಚನೆ, ಸಹಸ್ರ ದೀಪಾರ್ಚನೆ, ಪುಷ್ಪಾರ್ಚನೆಗಳು ಹೊಸದಾಗಿ ಸೇರಿಕೊಂಡವು. ಈಗ ಹಬ್ಬವೆಂದರೆ ಒಬ್ಬೊಬ್ಬ ದಾನಿಗಳ ಸೇವೆಯ ಹೆಸರಿನಲ್ಲಿ ಹಣದ ದುಂದು ನಡೆಯುತ್ತಿದೆ. ಸಾಮಾನ್ಯ ಜನರು ನಿಬ್ಬೆರಗಾಗಿ ನೋಡುತ್ತಿರುವಂತೆ ಚೌಡಮ್ಮ ಅವರ ಕೈತಪ್ಪಿಹೋಗುತ್ತಿದ್ದಾಳೆ. ಹಿಂದಿದ್ದ ಸರಳ ಆಚರಣಾ ವಿಧಿಗಳು ನೆಪಕ್ಕಾಗಿ ನಡೆಯುತ್ತಿವೆಯೇನೋ ಎಂದು ಭಾಸವಾಗುತ್ತಿದೆ. ಬೆಂಗಳೂರು ಕಡೆಯ ಜನರಿಂದ ವಿಸ್ಕಿ, ಬ್ರಾಂದಿ, ರಮ್ಮುಗಳ ತೀರ್ಥಸ್ನಾನ, ಇಸ್ಪೀಟು, ಮಟ್ಕಾ, ಲಾಟರಿಗಳ ಸ್ಪರ್ಧಾ ಪ್ರಪಂಚ, ಧ್ವನಿವರ್ಧಕ ಹೊದರುವ ಸಾಹಿತ್ಯವಿಲ್ಲದ ಸುಪ್ರಭಾತ ಇತ್ಯಾದಿಗಳಿಂದ ಜನಪದ ಗೀತೆ ಮತ್ತು ಕಲೆಗಳ ಸಮಾಧಿಯಾಗಿದೆ. ನಗರಗಳು ಹಳ್ಳಿಗಳ ಮೇಲೆ ನಡೆಸುತ್ತಿರುವ ಸಾಂಸ್ಕೃತಿಕ ಅತ್ಯಾಚಾರಕ್ಕೆ ಇದೊಂದು ಸ್ಪಷ್ಟ ಉದಾಹರಣೆ.

ರೇಷ್ಮೆ ಸೊಪ್ಪು ಕಿತ್ತು, ಹುಳ ಸಾಕಿ, ಗೂಡು ಮಾರಿ ಜೀವನ ಸಾಗಿಸುತ್ತಿದ್ದ ನನ್ನ ಕುಟುಂಬದಲ್ಲಿ ನನ್ನ ಅವ್ವನದೇ ಒಂದು ಕಥೆ. ತನ್ನ ಇಡೀ ಜೀವಮಾನದಲ್ಲಿ ಸೊಪ್ಪು ಕಿತ್ತು, ಹುಳ ಬದಲಿಸಿ; ಗೂಡು ಕಟ್ಟುವ ಹುಳುಗಳು ಬಿಡುತ್ತಿದ್ದ ರೇಷ್ಮೆ ಎಳೆಗಳನ್ನು ನೋಡಿ ಸಮಾಧಾನದ ಉಸಿರು ಬಿಡುತ್ತಿದ್ದ ನನ್ನ ಅವ್ವ ಆ ಗೂಡು ಮಾರಿ ಬಂದ ಹಣದಲ್ಲಿ ಯಾವಾಗಲಾದರೊಮ್ಮೆ ರೇಷ್ಮೆ ಸೀರೆಕೊಂಡುಕೊಳ್ಳಬೇಕೆಂಬ ಆಸೆ ಹೊತ್ತವಳು. ಪ್ರತಿ ಸಲವೂ ಒಂದಲ್ಲ ಒಂದು ಸಂಸಾರದ ತೊಂದರೆ. ರೇಷ್ಮೆ ಸೀರೆ ಕನಸಾಗಿಯೇ ಉಳಿಯಿತು. ಹಬ್ಬಕ್ಕೆ ಬಂದ ಬೆಂಗಳೂರು ಜನ, ಮದುವೆ ಮನೆಗಳಲ್ಲಿ

ತೊನೆದಾಡುತ್ತಾ ಓಡಾಡುವ ದೊಡ್ಡವರ ಜನ ಫಳಫಳ ಹೊಳೆಯುವ ರೇಷ್ಮೆ ಸೀರೆ ಉಟ್ಟು ನಲಿದಾಡುವುದನ್ನು ಕಂಡ ನನ್ನ ಅವ್ವ "ಇಡೀ ಜೀವಮಾನವೆಲ್ಲಾ ಸೊಪ್ಪು ತರದ್ರೂ ನನ್ ಬಗಟಕ್ಕೆ ಒಂದು ರೇಷ್ಮೆ ಸೀರೆ ಸಿಕ್ಲಿಲ್ಲ" ಎಂದು ಹಲುಬುತ್ತಿದ್ದುದನ್ನು ನಾನು ಕಂಡಿದ್ದೇನೆ. ಕಡೆಗೆ ನಾನು ಓದಿ, ಕೆಲಸ ಸಿಕ್ಕಿದ ಒಂದೆರಡು ವರ್ಷಗಳ ನಂತರ ಬೆಂಗಳೂರು ಚಿಕ್ಕಪೇಟೆ ಸುತ್ತಿ ಸಾಮಾನ್ಯವಾದ ಒಂದು ರೇಷ್ಮೆ ಸೀರೆ ಖರೀದಿಸಿ ಊರಿಗೆ ಹೋಗಿ ಕೊಟ್ಟಾಗ, ಅದನ್ನು ಅಕ್ಕಪಕ್ಕದ ಮನೆಯ ಹೆಂಗಸರಿಗೂ ತೋರಿಸಿ ಖುಷಿಪಟ್ಟ ಅವಳು ಅಂದು ಉಡದೆ, ಮುಂದಿನ ಮಾರ್ನಾಮಿ ಹಬ್ಬಕ್ಕೆ ತನ್ನ ಅವ್ವನಿಗೆ 'ಎಡೆ' ಇಡುವುದಾಗಿ ಹೇಳಿ ಹಳೇ ಟ್ರಂಕಿಗೆ ಸೇರಿಸಿದಳು. ಅಷ್ಟರಲ್ಲೇ ಹಾಸಿಗೆ ಹಿಡಿದು ಉಸಿರು ಬಿಟ್ಟ ನನ್ನವ್ವ ತನ್ನ ಕನಸಿನ ರೇಷ್ಮೆ ಸೀರೆ ಉಡಲೇ ಇಲ್ಲ. ಇದು ನನ್ನ ಅವ್ವ ಒಬ್ಬಳ ಕಥೆಯಲ್ಲ. ಅವಳಂತೆ ರೇಷ್ಮೆ ಸೊಪ್ಪು ಕೀಳುವ ಎಲ್ಲ ಹೆಂಗಸರ ಕಥೆ. ರೇಷ್ಮೆ ಸೊಪ್ಪನ್ನಾಗಲೀ, ಹುಳವನ್ನಾಗಲೀ, ಗೂಡನ್ನಾಗಲೀ ಎಂದೂ ಕಾಣದ ನಗರದ ಜನ ರೇಷ್ಮೆಸೀರೆಗಳ ಸುಗ್ಗಿಯಲ್ಲಿ ಮುಳುಗುವಾಗ ರೇಷ್ಮೆ ಹುಳುವಿನ ಕಸ ಮುಸುರೆಯಲ್ಲೇ ಜೀವ ತೇಯುವ ಜನ ರೇಷ್ಮೆಯ ಭಾಗ್ಯದಿಂದ ವಂಚಿತರು. ಇಂಥ ವಿಪರ್ಯಾಸ ಬಹುಶಃ ಯಾವ ದೇಶದಲ್ಲೂ ಇಲ್ಲವೇನೋ?

ನನಗೀಗ ೩೯ನೇ ವರ್ಷ. ನನ್ನ ಜೊತೆ ನಾಲ್ಕನೇ ತರಗತಿಯವರೆಗಿನ ಪ್ರೈಮರಿ ಶಾಲೆಯಲ್ಲಿ ಓದಿದ ನಾಲ್ಕಾರು ಹೆಣ್ಣುಮಕ್ಕಳನ್ನು ಅಲ್ಲೇ ಅಕ್ಕಪಕ್ಕದ ಊರುಗಳಿಗೆ ಮದುವೆ ಮಾಡಿಕೊಡಲಾಗಿದೆ. ಆದರೆ ಅವರಲ್ಲಿ ಹಲವರು ಇಂದು ಹೇಗಿದ್ದಾರೆ ಗೊತ್ತೇ? ಅಪ್ಪಟ ಮುದುಕಿಯರಾಗಿದ್ದಾರೆ. ಕಣ್ಣು ಬಳೆಗಳು ಬಿಟ್ಟುಕೊಂಡು ಮೂಳೆ ಚಕ್ಕಳ ಹೊತ್ತುಕೊಂಡು ಕಳೆಯೇ ಇಲ್ಲದ ನಡೆದಾಡುವ ಶವಗಳಾಗಿದ್ದಾರೆ. ೧೫-೧೬ಕ್ಕೇ ಮದುವೆಯಾಗಿ ಒಂದೇ ಸಮನೆ ಹೆತ್ತು ಬಡಕಲಾದ ಅವರಿಗೆ ಪೌಷ್ಟಿಕ ಆಹಾರವಿಲ್ಲ. ಪೌಷ್ಟಿಕ ಆಹಾರವನ್ನು ಅವರು ಉತ್ಪಾದಿಸುವುದಿಲ್ಲ ಎಂದಲ್ಲ. ನಾಲ್ಕಾರು ಹಸು ಎಮ್ಮೆಗಳು ಹಾಲು ಕರೆಯುತ್ತವೆ. ಹಲವಾರು ತರಕಾರಿಗಳನ್ನು ಬೆಳೆಯುತ್ತಾರೆ. ಆದರೆ ಹಳ್ಳಿಗಳಲ್ಲಿ ಇಂದು ಹಣದ ಕೊರತೆ ಹೇಗಿದೆ ಎಂದರೆ ಅವರ ಉತ್ಪಾದನೆಯ ಹಣ ಬಟ್ಟೆ ಬರೆ ಉಪ್ಪು ಮೆಣಸಿಗೆ ಸಾಲುವುದಿಲ್ಲ. ಅದರಲ್ಲೂ ಮನೆಯಲ್ಲಿ ಖೋಡೆ, ಮಲ್ಯಗಳಿಗೆ ಶರಣಾದವರಿದ್ದರೆ ಮುಗಿಯಿತು. ಯಾವ ಹಣವೂ ಸಾಲದು. ಹೀಗಾಗಿ 'ಡೈರಿ ಡೆವಲಪ್ ಮೆಂಟ್' ಹೆಸರಿನಲ್ಲಿ ಹಾಲು ಬೆಣ್ಣೆಗಳು ಡಬ್ಬಿ ತುಂಬಿ ಬೆಂಗಳೂರಿಗೆ ಸಾಗಿಸಲ್ಪಡುತ್ತವೆ. ತರಕಾರಿಗಳು ಕೂಡ ಬುಟ್ಟಿ ತುಂಬಿಕೊಂಡು ಬೆಂಗಳೂರು ಕಡೆಗೇ ಪಯಣ ಬೆಳೆಸುತ್ತವೆ. ಕಡೆಗೆ ಹುರುಳಿ ಕಾಳು ಸಾರಿನ ಮುದ್ದೆ ಮಾತ್ರ ಅವರ ಪಾಲಿಗೆ ಉಳಿಯುತ್ತದೆ. ಮಳೆ ಕೈಕೊಟ್ಟರೆ ಇದು ಕೂಡ ೩೬೫ ದಿನವೂ ಸಿಗುತ್ತದೆಂಬ ಭರವಸೆ

ಇಲ್ಲ. ಹಾಲು ಹಿಂಡುವ ಕೈಗಳು ಹಾಲಿಲ್ಲದೆ, ಮೊಸರು ಕಡೆಯುವ ಕೈಗಳು ಬೆಣ್ಣೆ ಇಲ್ಲದೆ ಬದುಕುವ ದುರ್ಬರತೆಯನ್ನು ನಾವು ತಂದಿಟ್ಟಿದ್ದೇವೆ.

೨

ಸದ್ಯಕ್ಕೆ ಇಷ್ಟು ಉದಾಹರಣೆಗಳ ಹಿನ್ನೆಲೆಯಲ್ಲಿ ಈ ಕಾಂಕ್ರಿಟ್ ಸಂಸ್ಕೃತಿ ಹೇಗೆ ಜನಪದ ಬದುಕನ್ನು ನುಂಗಿ ನೊಣೆಯ ಹೊರಟಿದೆ ಎಂಬುದನ್ನು ಇನ್ನಷ್ಟು ಸೂಕ್ಷ್ಮವಾಗಿ ನಾವು ನೋಡಬೇಕಾಗಿದೆ. ಇಲ್ಲಿ 'ಕಾಡು' ಎಂಬುದು ಒಟ್ಟಾರೆ ಜನಪದ ಪರಿಸರಕ್ಕೆ ಸಂಬಂಧಪಟ್ಟ ವಿಚಾರವಾದರೆ 'ಕಾಂಕ್ರೀಟ್' ನವ ವಸಾಹತುಶಾಹಿ ಧೋರಣೆಯ ಆಧುನಿಕತೆಯನ್ನು ಸಂಕೇತಿಸುತ್ತದೆ. ನನ್ನ ಇಡೀ ಲೇಖನ ಈ ರೀತಿಯ ಅರ್ಥೈಸುವಿಕೆಯ ಹಿನ್ನೆಲೆಯಲ್ಲೇ ಸಾಗುತ್ತಿದೆ ಎಂದು ನಾನು ನಂಬಿದ್ದೇನೆ.

**ಸೃಷ್ಟಿಸುವ ಸಂಸ್ಕೃತಿ ಮತ್ತು ಭೋಗಿಸುವ ಸಂಸ್ಕೃತಿ**

ಸಂಸ್ಕೃತಿಯನ್ನು ಕುರಿತಂತೆ ಹಲವು ಚರ್ಚೆಗಳು ಆರಂಭವಾಗಿರುವ ಈ ಸಂದರ್ಭದಲ್ಲಿ ಸೃಷ್ಟಿಸುವ ಮತ್ತು ಭೋಗಿಸುವ ಸಂಸ್ಕೃತಿಗಳು ಕೂಡ ಬೇರೆ ಬೇರೆಯಾಗಿವೆ ಎಂಬುದನ್ನು ನಾವು ಮರೆಯುವಂತಿಲ್ಲ. ಇದುವರೆಗಿನ ನಮ್ಮ ಸಂಸ್ಕೃತಿಯ ವ್ಯಾಖ್ಯಾನ ಸಾಮಾಜಿಕ ಹಿನ್ನೆಲೆಯಲ್ಲಿ ಇರುತ್ತಿತ್ತು. ಹಾಗೂ ಒಂದು ಭೌಗೋಳಿಕ ಪ್ರದೇಶದ ವ್ಯಾಪ್ತಿಯಲ್ಲಿದ್ದು ಇದು ಮೇಲ್ವರ್ಗದವರ ಅಥವಾ ಕೆಳವರ್ಗದವರ ಸಂಸ್ಕೃತಿ ಎಂದು ವಿಭಜಿಸಲ್ಪಡುತ್ತಿತ್ತು. ಅಥವಾ ಒಟ್ಟಾರೆಯಾಗಿ ಶಿಷ್ಟ ಮತ್ತು ಜನಪದ ಸಂಸ್ಕೃತಿ ಎಂದು ಕರೆಯಿಸಿಕೊಳ್ಳುತ್ತಿತ್ತು. ವರ್ಗದ ಕಾರಣಕ್ಕಾಗಿ ಪ್ರಧಾನ ಸಂಸ್ಕೃತಿ ಮತ್ತು ಅಧೀನ ಸಂಸ್ಕೃತಿ ಎಂದೂ ಆರ್ಥಿಕ ಕಾರಣಕ್ಕಾಗಿ ಉಳ್ಳವರ ಮತ್ತು ಇಲ್ಲದವರ ಸಂಸ್ಕೃತಿ ಎಂದೂ ಕೆಲವು ಜನಾಂಗಗಳಿಗಿರಬಹುದಾದ ವಿಭಿನ್ನ ಜೀವನ ದೃಷ್ಟಿಯ ಕಾರಣಕ್ಕಾಗಿ ಉಪಸಂಸ್ಕೃತಿಗಳು ಎಂದೂ ಈ ಉಪ ಸಂಸ್ಕೃತಿಗಳೇ ಮೂಲ ಸಂಸ್ಕೃತಿಗೆ ಹತ್ತಿರವಾದ ನಿಜ ಸಂಸ್ಕೃತಿ ಎಂದೂ ಅರ್ಥೈಸಿದ್ದುಂಟು. ಇವೆಲ್ಲ ಸಾಂಸ್ಕೃತಿಕ ಅಧ್ಯಯನದ ಹಲವು ಮಜಲುಗಳು ಎಂಬುದೇನೋ ನಿಜ. ಆದರೆ ಇವತ್ತಿನ ಸೂಕ್ಷ್ಮ ಪರಿಸ್ಥಿತಿಯಲ್ಲಿ ಈ ಎಲ್ಲ ವಿಂಗಡಣೆಗಳನ್ನು ಮೀರಿ ಆಲೋಚಿಸಬೇಕಾದ ಅಗತ್ಯವಿದೆ. ಇದು ತುರ್ತು ಕೂಡ ಎಂದು ನಾನು ತಿಳಿಯುತ್ತೇನೆ. ಯಾಕೆಂದರೆ ಹೆಸರಿಗೆ ಪ್ರಜಾಪ್ರಭುತ್ವ ರಾಷ್ಟ್ರ ಎಂದು ಬೆನ್ನು ತಟ್ಟಿಕೊಳ್ಳುತ್ತಿರುವ ನಾವು, ಆ ಸಂವಿಧಾನದ ಪುಸ್ತಕದಲ್ಲಿ ಅಚ್ಚಾದ ಪ್ರಭುತ್ವ ಎಲ್ಲಿ ಮತ್ತು ಹೇಗೆ ಸಾರ್ಥಕವಾಗುತ್ತಿದೆ ಎಂಬ ವಿಚಾರದಲ್ಲಿ ಎಲ್ಲ ಗೊತ್ತಿದ್ದೂ ಮೂಕರಾಗಿದ್ದೇವೆ. ಆತ್ಮ ವಂಚನೆಯಲ್ಲಿ ತೊಡಗಿದ್ದೇವೆ. ಈ ದೇಶದಲ್ಲಿ ಪ್ರಜಾಪ್ರಭುತ್ವದ ಲಾಭ ಆಗಿರುವುದು ರಾಜಕೀಯ ಶಾಹಿ, ಅಧಿಕಾರಶಾಹಿ, ನೌಕರಶಾಹಿ ಮತ್ತು ವ್ಯಾಪಾರಶಾಹಿಗೆ ಮಾತ್ರ ಎಂಬ ಸತ್ಯ

ನಮ್ಮೆಲ್ಲರಿಗೂ ಗೊತ್ತಿದೆ. ಓಟು ಮಾಡುವ ಮೂಲಕ ನಮಗೆ ಬೇಕಾದ ಪ್ರತಿನಿಧಿಯನ್ನು ನಾವು ಆರಿಸಿಕೊಳ್ಳುತ್ತೇವೆ ಎಂಬುದು ಹಳ್ಳಿಯ ರೈತನಿಗೂ ಕಾಡಿನ ನಿವಾಸಿಗೂ ಈಗ ಗೊತ್ತಿದೆ. ಆದರೆ ಹಾಗೆ ಆಯ್ಕೆ ಮಾಡುವ ಪ್ರತಿಯೊಬ್ಬ ಪ್ರತಿನಿಧಿಯೂ ಕಾಂಕ್ರಿಟ್ ಸಂಸ್ಕೃತಿಯ ವಕ್ತಾರನೇ ಆಗುತ್ತಾನೆ ಎಂಬ ಸತ್ಯ ಗೊತ್ತಿಲ್ಲ. ಈ ಮೂಲಕ ನಮ್ಮ ಪ್ರಜಾಪ್ರಭುತ್ವದಲ್ಲಿ ನೀಡಲಾದ ತನ್ನ ಓಟು ನಿಷ್ಫಲವಾಗುತ್ತದೆ ಹಾಗೂ ತನ್ನ ವಿರುದ್ಧವೇ ಆಗಿರುತ್ತದೆ ಎಂಬ ಎಚ್ಚರಿಕೆ ಇಲ್ಲದ ಮುಗ್ಧ ಅವನಾಗಿರುತ್ತಾನೆ ಎಂಬುದನ್ನು ಅಲ್ಲಗಳೆಯುವಂತಿಲ್ಲ.

ಅಂದರೆ, ನನ್ನ ಮಾತಿನ ಅರ್ಥ ಇಷ್ಟೆ. ನಮ್ಮ ಯಾವೊಬ್ಬ ಪ್ರತಿನಿಧಿಯೂ ನಮ್ಮ ಹಳ್ಳಿಯಲ್ಲಿ ಉತ್ಪಾದನೆಯಾಗುವ ಬೆಣ್ಣೆ, ತುಪ್ಪ ಇತ್ಯಾದಿಗಳು ಮೊದಲು ಅವರ ಹೊಟ್ಟೆ ತುಂಬಿಸಿ ನಂತರ ಮುಂದಕ್ಕೆ ಹೋಗಲಿ ಎಂದು ಯೋಚಿಸಲಿಲ್ಲ. ಹಾಗೇ ಹತ್ತಿ, ರೇಷ್ಮೆ, ಸೆಣಬು ಬೆಳೆಯುವ ಜನಕ್ಕೆ ಮೊದಲು ಬಟ್ಟೆ ಸಿಗುವಂತಾಗಬೇಕು ಎಂದು ಯೋಚಿಸಲಿಲ್ಲ. ಇವರೆಲ್ಲರ ದೃಷ್ಟಿಯಲ್ಲಿ ನಗರದ ಜನತಾ ಬಜಾರುಗಳಲ್ಲಿ ಪ್ರಿಯದರ್ಶಿನಿ ಹ್ಯಾಂಡ್ ಲೂಮುಗಳಲ್ಲಿ ಸರ್ಕಾರಿ ಗೋದಾಮುಗಳಲ್ಲಿ ಸರಕು ಖಾಲಿಯಾಗದಂತೆ ಸದಾ ತುಂಬಿರಬೇಕು. ತಿಂಗಳ ಸಂಬಳ ಬಂದಾಗ, ಇನ್ನಾವುದೇ ಲಾಭವಾದಾಗ ರಿಯಾಯಿತಿ ಸೇಲ್‌ಗಳಲ್ಲಿ ಇವೆಲ್ಲ ಪೇಟೆಯವರಿಗೇ ದಕ್ಕಬೇಕು. ಇಲ್ಲದ್ದರೆ ಹಾಹಾಕಾರವೇಳುತ್ತದೆ.

ಇದನ್ನೇ ನಾನು ಸೃಷ್ಟಿಸುವ ಸಂಸ್ಕೃತಿ ಮತ್ತು ಭೋಗಿಸುವ ಸಂಸ್ಕೃತಿ ಎಂದು ಕರೆದದ್ದು. ನಮ್ಮ ಇಂಡಿಯಾದ ಕಮ್ಯುನಿಸ್ಟರು ಇದನ್ನು ಮಾಲೀಕ ಮತ್ತು ಕಾರ್ಮಿಕ ಎಂದು ವಿಂಗಡಿಸಿ ಕೈತೊಳೆದುಕೊಂಡುಬಿಟ್ಟಿದ್ದಾರೆ. ಆ ರೀತಿಯ ಸಂಕುಚಿತಾರ್ಥದಲ್ಲಿ ನಾನು ಇಲ್ಲಿ ಬಳಸುತ್ತಿಲ್ಲ. ಸೃಷ್ಟಿಸುವ ಸಂಸ್ಕೃತಿ ಎಂದರೆ ಕಾರ್ಮಿಕರು, ರೈತರು, ಕೂಲಿಕಾರರು ಮುಂತಾಗಿ ದುಡಿಯುವ ವರ್ಗಕ್ಕೆ ಮಾತ್ರ ಎಂದೂ ಸೀಮಿತಗೊಳಿಸುವುದಿಲ್ಲ. ಸೃಷ್ಟಿಸುವ ಶಕ್ತಿ ಪಡೆದ ಭೂಮಿ, ಕಾಡು, ಜಲ, ಪ್ರಾಣಿ ಪಕ್ಷಿ ಮುಂತಾಗಿ ಒಂದು ಅಖಂಡ ಶಕ್ತಿ. ಸೃಷ್ಟಿಸುವ ಈ ಪ್ರಕ್ರಿಯೆಯಲ್ಲಿ ಸೂರ್ಯ ಚಂದ್ರ, ವಾಯು, ಅಗ್ನಿ ಆದಿಯಾಗಿ ಸಕಲ ಚರಾಚರ ಜೀವರಾಶಿಗಳೂ ಸೇರಿ ಬಿಡುತ್ತವೆ. ಏಕೆಂದರೆ ಹಾಲು ಬೆಣ್ಣೆಯನ್ನು ಮನುಷ್ಯ ಉತ್ಪಾದಿಸಲು ಸಾಧ್ಯವೇ ಇಲ್ಲ. ದವಸ ಧಾನ್ಯವನ್ನು ಮನುಷ್ಯ ಸೃಷ್ಟಿಸಲು ಸಾಧ್ಯವೇ ಇಲ್ಲ, ನಾನಿಲ್ಲಿ ಎಲ್ಲವನ್ನೂ ಆಧ್ಯಾತ್ಮಿಕರಿಸುತ್ತಿದ್ದೇನೇನೋ ಎಂಬ ಭಯ ಕಾಡುತ್ತಿದೆ. ಅಂದರೆ, ನಾನು ಒಟ್ಟಾರೆ ಹೇಳಬೇಕಾದುದಿಷ್ಟೇ. ಪ್ರಕೃತಿಯಲ್ಲಿನ ಸೌಲಭ್ಯಗಳನ್ನು ಬಳಸಿಕೊಂಡು ಉತ್ಪಾದನೆಗೆ ರೂಪ ಕೊಡುವವರು ಮನುಷ್ಯರು. ಈ ಉತ್ಪಾದನೆಯ ಹಿಂದೆ ಇಡೀ ಪ್ರಕೃತಿಯೇ

ಇರುತ್ತದೆ. ಆ ಪ್ರಕೃತಿಯನ್ನು ನೆಚ್ಚಿ ನಂಬಿ ಅದಕ್ಕೂ ದ್ರೋಹ ಬಗೆಯದೆ ಉತ್ಪಾದಿಸುವ ಕ್ರಿಯೆಯಲ್ಲಿ ತೊಡಗುವವರೇ ಈ ಉತ್ಪಾದನಾ ಸಂಸ್ಕೃತಿಗೆ ಸೇರಿದವರು. ಅರ್ಥಾತ್ ಜನಪದರು. ಇವರ ಮೂಲ ನೆಲೆ ಇರುವುದೇ 'ನೆಲ' 'ಜಲ' ಮತ್ತು 'ವನ'ದಲ್ಲಿ.

ಆದರೆ ಭೋಗಿಸುವ ಸಂಸ್ಕೃತಿಗೆ ಈ ನೆಲ, ಜಲ ಮತ್ತು ವನಗಳ ರಕ್ಷಣೆಯ ಬಗ್ಗೆ ಕಾಳಜಿಯಿಲ್ಲ. ಅಥವಾ ಅದನ್ನು ನಂಬಿದ ಈ ಜೀವಿಗಳ ಬಗ್ಗೆಯೂ ಕಾಳಜಿ ಇಲ್ಲ. ಅದಕ್ಕೆ ಬೇಕಾಗಿರುವುದು ಸಂಪತ್ತಿನ ಏಕಮುಖ ಪ್ರವಾಹ. ತಾ ಎನ್ನುವುದೇ ಹೊರತು ತಗೋ ಎಂದು ಹೇಳಲಾರದ ಈ ಸಂಸ್ಕೃತಿಯ ಪರವಾಗಿಯೇ ನಮ್ಮನ್ನು ಆಳುವ ವಕ್ತಾರರೂ ಇದ್ದಾರೆ ಎಂಬುದಕ್ಕೆ ನಮ್ಮ ಬೆಂಗಳೂರು ನಗರದ ಉದಾಹರಣೆಯನ್ನೇ ನೀಡಬಹುದು. ಇಡೀ ರಾಜ್ಯದ ಅಭಿವೃದ್ಧಿಯಲ್ಲಿ ಶೇಕಡಾ ೨೫ ರಷ್ಟನ್ನು ಬೆಂಗಳೂರಿಗೇ ಸುರಿಯುವ ಹಿಂದಿನ ಹುನ್ನಾರ ಏನು? ಇದಕ್ಕೆ ಅಧಿಕಾರಶಾಹಿ ಕೊಡುವ ಉತ್ತರ ಬೆಂಗಳೂರು ಶೇಕಡಾ ೫೦ ರಷ್ಟು ತೆರಿಗೆ ಕೊಟ್ಟು ಖಜಾನೆ ತುಂಬುತ್ತದೆ ಎಂಬುದು. ವ್ಯಾಪಾರಿಗಳನ್ನು, ಕಾಳಸಂತೆಕೋರರನ್ನು, ಒಟ್ಟಾರೆ ಭ್ರಷ್ಟರನ್ನು ಕೊಬ್ಬಿಸುವ ನಗರಗಳು ಅವರ ಆದಾಯಗಳ ಶೇಕಡಾ ೫ ರಷ್ಟನ್ನೂ ತೆರಿಗೆಯಾಗಿ ಪಡೆಯುವ ಸ್ಥಿತಿಯಲ್ಲೂ ಇರುವುದಿಲ್ಲ. ಯಾಕೆಂದರೆ ಅವರ ಕಪ್ಪು ಹಣದ ಲೆಕ್ಕ ಸಿಗಲು ಸಾಧ್ಯವಿಲ್ಲ. ತೆರಿಗೆ ಎಂಬುದು ಕಣ್ಣೊರೆಸುವ ತಂತ್ರವಾಗಿದೆ ಮಾತ್ರವಲ್ಲದೆ, ನ್ಯಾಯದ ನಾಟಕವಾಡಲು ಇರುವ ದಾರಿ ಕೂಡ.

ಹೀಗಾಗಿ ಇವತ್ತಿನ ಇಡೀ ನಗರಗಳೇ ನವ ವಸಾಹತುಶಾಹಿ ವ್ಯವಸ್ಥೆಯ ರೂಪಗಳಾಗಿ ಗೋಚರಿಸುತ್ತಿವೆ. ಒಟ್ಟಾರೆ ಜನಸಂಖ್ಯೆಯಲ್ಲಿ ಶೇಕಡಾ ೨೫ ರಷ್ಟನ್ನು ಹಾಗೂ ಒಟ್ಟಾರೆ ಭೂಮಿಯಲ್ಲಿ ಶೇಕಡಾ ೩ ರಷ್ಟನ್ನು ಹೊಂದಿದ ಈ ನಗರಗಳು ಉಳಿಕೆ ಶೇಕಡಾ ೭೫ ರಷ್ಟು ಜನರನ್ನು ಮತ್ತು ಶೇಕಡಾ ೯೭ ರಷ್ಟು ಭೂಮಿಯನ್ನು ಆ ಮೂಲಕವೇ ಆ ಇಡೀ ಭೂಮಿಗೆ ಸೇರಿದ ಸಮಸ್ತ ಚರಾಚರ ವಸ್ತುಗಳನ್ನು ಜೀವ ಸಂಕುಲಗಳನ್ನೂ ನಿಯಂತ್ರಿಸತೊಡಗಿವೆ. ಅಂದರೆ ಉಳಿಕೆ ಭೂಮಿಯ ಸಮಸ್ತ ಚರಾಚರಾ ಸಂಕುಲವಾದ ಮರಗಿಡಬಳ್ಳಿ ಹುಳು ಹುಪ್ಪಟೆ ಪ್ರಾಣಿ ಪಕ್ಷಿ ನದಿ ತೊರೆ ಹಳ್ಳ ಹಾಗೂ ಜಲಾಶಯಗಳೆಲ್ಲವೂ ಇರುವುದು ನಗರದ ಜನಕ್ಕಾಗಿ ಮಾತ್ರ ಎಂಬ ಧೋರಣೆಯಲ್ಲೇ ಕೆಲಸಗಳು ನಡೆಯುತ್ತಿವೆ. ಅಂದರೆ ಪರೋಕ್ಷವಾಗಿ ನಗರವನ್ನು ಕೊಬ್ಬಿಸುವುದಕ್ಕೆ ಟೊಂಕಕಟ್ಟಿ ನಿಲ್ಲುವಂಥ ವ್ಯವಸ್ಥೆಯನ್ನು ನಾವೇ ನಿರ್ಮಾಣ ಮಾಡಿಬಿಟ್ಟಿದ್ದೇವೆ. ಸದಾ ವಿಕೇಂದ್ರಿಕರಣದ ಬಗ್ಗೆ ಬೊಬ್ಬೆ ಹಾಕುವ ನಮ್ಮ ರಾಜಕಾರಿಣಿಗಳು ಹೇಗೆ ಆ ವಿಕೇಂದ್ರಿಕರಣವನ್ನು ಭಸ್ಮ ಮಾಡಿಬಿಟ್ಟಿದ್ದಾರೆ ಎಂದರೆ ಅವರನ್ನು ಯಾರೂ ಯಾವ ಜನ್ಮಕ್ಕೂ ಕ್ಷಮಿಸಲು ಸಾಧ್ಯವಿಲ್ಲವೆನ್ನಿಸುತ್ತದೆ.

## ಅಭಿವೃದ್ಧಿಯ ಕಲ್ಪನೆ ಮತ್ತು ಹಳ್ಳಿಗಳು

ನಮ್ಮ ನಾಡಿನ ಅಭಿವೃದ್ಧಿಯ ಕಲ್ಪನೆಯೇ ವಿಚಿತ್ರವಾಗಿದೆ. ಇದರಲ್ಲಿ ಎರಡು ನೀತಿಗಳನ್ನು ನಾವು ಗಮನಿಸಬಹುದಾಗದೆ.

೧. ಇಡೀ ನಾಡಿನ ಒಟ್ಟಾರೆ ಅಭಿವೃದ್ಧಿ ನೀತಿ

೨. ಉಪ-ಪ್ರಾಂತಗಳ ಅಭಿವೃದ್ಧಿ ನೀತಿ.

ನಮ್ಮ ದೇಶದ ರಾಜಕೀಯ ವ್ಯವಸ್ಥೆಯ ಪ್ರತಿಬಿಂಬವೋ ಎಂಬಂತೆ ಈ ಅಭಿವೃದ್ಧಿ ನೀತಿಯೂ ಅಸ್ಪಷ್ಟವಾಗಿದೆ. ನಮ್ಮ ರಾಜಕಾರಣ ಹೇಳುವುದು ವಿಕೇಂದ್ರಿಕರಣ. ಮಾಡುವುದು ಕೇಂದ್ರೀಕರಣ. ಒಂದು ದೆಹಲಿ ಇಡೀ ದೇಶವನ್ನು ನಿಯಂತ್ರಿಸಿದರೆ ಒಂದು ಬೆಂಗಳೂರು ರಾಜ್ಯವನ್ನು ನಿಯಂತ್ರಿಸುತ್ತದೆ. ದೆಹಲಿ ಹೇಗೆ ಕೇಂದ್ರೀಕರಣವನ್ನು ಪೋಷಿಸುತ್ತಿದೆ ಎಂದರೆ ತಾನು ಸೃಷ್ಟಿಸಿದ ಐ.ಎ.ಎಸ್; ಐ.ಪಿ.ಎಸ್; ಮತ್ತು ಐ.ಎಫ್. ಎಸ್‌ಗಳೇ ಒಟ್ಟಾರೆ ನಾಡಿನ ಮೇಲ್ವಿಚಾರಕರು. ಇವರು ಎಂದಿಗೂ ಕೇಂದ್ರ ಸರ್ಕಾರದ ನಿಷ್ಠರೇ ಹೊರತು ಪ್ರಾಂತಗಳ ನಿಷ್ಠರಲ್ಲ. ಇವರಿಗೆ ಕೊಟ್ಟ ಈ ಅಧಿಕಾರ ಅವರನ್ನು ಎಲ್ಲಿಯವರೆಗೆ ಕರೆದುಕೊಂಡು ಹೋಗಿದೆ ಎಂದರೆ ಐ.ಎ.ಎಸ್. ಮಾಡಿದವನೇ 'ಪರಮ ಜ್ಞಾನಿ' ಎಂಬ ನಂಬಿಕೆ ಬೆಳೆಯುವಷ್ಟರ ಮಟ್ಟಿಗೆ ಇದು ಸಾಗಿದೆ. ಈ ನಂಬಿಕೆಯೇ ನಮ್ಮನ್ನು ಆಳುವ ಪ್ರತಿನಿಧಿಗಳಿಗೂ ಇರುವುದರಿಂದಲೇ ಅವರ ಮುಂದೆ ಸಲಾಮು ಹೊಡೆದು ಅವರ ಆದೇಶಕ್ಕಾಗಿ ಕಾಯುವ ದುರಂತ ನಡೆಯುತ್ತಿದೆ. ಇದು ಆಡಳಿತಾತ್ಮಕ ವಾಗಿ ಆಯಿತು. ಇನ್ನು ಅಭಿವೃದ್ಧಿ ಕಲ್ಪನೆಯ ವಾಸ್ತವಕ್ಕೆ ಬರೋಣ. ನಮ್ಮ ದೇಶ, ರಾಷ್ಟ್ರದ ಒಟ್ಟಾರೆ ಅಭಿವೃದ್ಧಿ ನೀತಿಯನ್ನು ಆರಿಸಿಕೊಂಡ ರೀತಿಯಲ್ಲಿ ಅಥವಾ ಅದಕ್ಕೆ ಪ್ರಾಶಸ್ತ್ಯ ಕೊಟ್ಟ ರೀತಿಯಲ್ಲಿ ಉಪ ಪ್ರಾಂತಗಳ ಅಭಿವೃದ್ಧಿ ನೀತಿಗೆ ಪ್ರಾಶಸ್ತ್ಯ ಕೊಡಲಿಲ್ಲ. ಜಿಲ್ಲಾ ಪಂಚಾಯಿತಿ, ತಾಲೋಕು ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿಗಳೆಂಬ ವ್ಯವಸ್ಥೆಯೇನೋ ನಮ್ಮಲ್ಲಿದೆ. ಆದರೆ ಅದು ಯಶಸ್ಸು ಪಡೆಯಲು ಆಗದಂಥ ಹೇರಿಕೆಯ ಅಧಿಕಾರವೂ ಬೆನ್ನ ಹಿಂದೆಯೇ ಮೆರೆಯುತ್ತದೆ. ಅಂದರೆ ಒಟ್ಟಾರೆ ಅಭಿವೃದ್ಧಿಯ ನೆಪದಲ್ಲಿ, ದೇಶ ಅಥವಾ ರಾಷ್ಟ್ರ ಎಂಬ ಕಲ್ಪನೆಯ ಭ್ರಮೆಗೆ ಒಳಪಡಿಸಿ ಸಣ್ಣದ್ದನ್ನು ನಿರ್ಲಕ್ಷಿಸುವ ತಂತ್ರ ನಡೆಯುತ್ತಿದೆ. ಇಡೀ ದೇಶ ಕಟ್ಟುವ ನೆಪದಲ್ಲಿ, ರಾಷ್ಟ್ರಭ್ಯುದಯದ ನೆಪದಲ್ಲಿ ಸಣ್ಣಪುಟ್ಟದ್ದನ್ನು, ತನಗೆ ಸರಿಬಾರದ್ದನ್ನು ಅಳಿಸಿ ಹಾಕಿಬಿಡುವ ವ್ಯವಸ್ಥಿತ ಸಂಚು ಇಲ್ಲಿದೆ. ಇದು ನಮ್ಮಲ್ಲಿ ತುಂಬಾ ನಾಜೂಕಾಗಿ ನಡೆಯುತ್ತದೆ. ಹಾಗಿಲ್ಲದಿದ್ದರೆ ಇಷ್ಟೆಲ್ಲಾ ವಿರೋಧದ ನಡುವೆಯೂ ನರ್ಮದಾ ಅಣೆಕಟ್ಟು ನಿರ್ಮಾಣವಾಗುತ್ತಿತ್ತೇ? ಈ ಅಣೆಕಟ್ಟಿನ ಕಾರಣಕ್ಕಾಗಿ ಇದರಲ್ಲಿ ಮುಳುಗುವ ೨೦೦೦೦ ಬುಡಕಟ್ಟುಗಳ ಭವಿಷ್ಯಕ್ಕಿಂತ ಆ ಅಣೆಕಟ್ಟಿನಿಂದ ಉದ್ಧಾರವಾಗುತ್ತದೆಂದು

ಭಾವಿಸಿದ ಇನ್ನೊಂದು ಬಹುಸಂಖ್ಯಾತ ಪ್ರದೇಶದ ಅಭಿವೃದ್ಧಿ ನಮಗೆ ಮುಖ್ಯವಾಗಿ ಬಿಡುತ್ತದೆ. ದೇಶದ ಸಂಪತ್ತು ಹೆಚ್ಚಿಸಲು ತೆಗೆಯಬೇಕೆಂದಿರುವ ಕುದ್ರೆಮುಖ ಅದಿರು ತುಂಗಾ ನದಿಯನ್ನು ಇಲ್ಲವಾಗಿಸಿದರೂ ಪರವಾಗಿಲ್ಲ, ದೇಶದ ಆದಾಯಕ್ಕಾಗಿ ಕೋಟ್ಯಾಂತರ ತರಬಲ್ಲ ಕಾಡುಗಳ ಅಭಿವೃದ್ಧಿ ಹೆಸರಿನಲ್ಲಿ ಅಲ್ಲಿನ ಬುಡಕಟ್ಟುಗಳನ್ನು ಎತ್ತಂಗಡಿ ಮಾಡಿದರೂ ಚಿಂತೆ ಇಲ್ಲ, ಭಾರತದ ರೇಷ್ಮೆಗೆ ಪ್ರಪಂಚ ಮಾರುಕಟ್ಟೆಯಲ್ಲಿ ಬೆಲೆ ಇಲ್ಲ ಎಂಬ ನೆಪವೊಡ್ಡಿ ಬಂಡವಾಳಶಾಹಿ ರಾಷ್ಟ್ರಗಳಿಂದ ಆಮದು ಮಾಡಿಕೊಳ್ಳುವ ಮೂಲಕ ಇಲ್ಲಿನ ಲಕ್ಷಾಂತರ ರೈತರ ಬಾಯಿಗೆ ಬೀಗ ಹಾಕಿದರೂ ಪರವಾಗಿಲ್ಲ. ಇಂಥದ್ದನ್ನು ಪ್ರಶ್ನೆ ಮಾಡುವವ ದೇಶದ್ರೋಹಿ ಎಂಬ ಅಥವಾ ಪ್ರಗತಿ ವಿರೋಧಿ ಎಂಬ ಹಣೆಪಟ್ಟಿ ಕಟ್ಟಿಕೊಂಡು ಕೂರಬೇಕಾಗುತ್ತದೆ.

ಸಣ್ಣಪುಟ್ಟ ಕೆರೆಕಟ್ಟೆ ಕುಂಟೆಗಳ ನಿರ್ಮಾಣವನ್ನು ಬದಿಗೊತ್ತಿದ ಬೃಹತ್ ಅಣೆಕಟ್ಟೆಗಳ ಸಂಸ್ಕೃತಿ ಇನ್ನೊಂದು ಅನಾಹುತಕ್ಕೆ ದಾರಿಮಾಡಿಕೊಡುತ್ತಿದೆ. ಈ ಕಾಂಕ್ರೀಟಿನ ಆಣೆಗಳು ಎಷ್ಟು ಕಾಡುಗಳನ್ನು ನುಂಗಿವೆ, ಅದರೊಳಗಿನ ಎಷ್ಟೆಲ್ಲ ಜೀವಜಗತ್ತನ್ನು ನಾಶಪಡಿಸಿವೆ ಹಾಗೂ ಇದರಿಂದಾಗುವ ಪರಿಸರದ ಅಸಮ ತೋಲನವೇನು ಎಂಬ ಪ್ರಶ್ನೆಯೂ ಹಾಗಿರಲಿ. ಇನ್ನೊಂದು ರೀತಿಯ 'ಮೀನುಗಳ' ಕಥೆ ಇಲ್ಲಿ ಆರಂಭವಾಗಿದೆ. ಮೀನುಗಳು ಅಂದ ತಕ್ಷಣ ಅರ್ಥಕ್ಕರ್ಥ ನಮ್ಮ ಯೋಜನೆಯ ಹಣವನ್ನು ನುಂಗಿ ನೊಣೆಯುತ್ತಿರುವ 'ತಂತ್ರಜ್ಞ' ಮೀನುಗಳ ಬಗ್ಗೆಯೂ ನಾನಿಲ್ಲಿ ಪ್ರಸ್ತಾಪಿಸುತ್ತಿಲ್ಲ. ಒಂದು ಅಣೆಕಟ್ಟು, ಅದರ ನಾಲೆಗಳು, ನಾಲೆಗಳ ಉಪನಾಲೆಗಳು ಎಂಬ ಈ ಚಕ್ರವ್ಯೂಹದ ನೀರಿನ ಹರಿದಾಟದಲ್ಲಿ ಸಣ್ಣ ರೈತ ಅಥವಾ ಕೃಷಿ ಕೂಲಿಕಾರ ಹೇಗೆ ನಾಶವಾಗುತ್ತಿದ್ದಾನೆ ಮತ್ತು ಹಾಗೆ ಆಗುವ ಮೂಲಕ ನಮ್ಮ ಸಾಂಸ್ಕೃತಿಕ ದುರಂತವೊಂದು ಹೇಗ ಸಂಭವಿಸುತ್ತಿದೆ ಎಂಬುದರ ಕಡೆಗೆ ಗಮನ ಸೆಳೆಯುವುದೇ ಇಲ್ಲಿನ ನನ್ನ ಉದ್ದೇಶ. ಈ ಅಣೆಕಟ್ಟುಗಳ ನಿರ್ಮಾಣವಾಗಿ ಬತ್ತ ಕಬ್ಬು ಮುಂತಾದ ಬೆಳೆಗಳು ವಿಶಾಲವಾದ ಬಯಲಿನಲ್ಲಿ ಬೆಳೆಯತೊಡಗಿದ ತಕ್ಷಣವೇ ನಮ್ಮ ರೈತರ ಕೃಷಿ ವಿಧಾನವೂ ಒಮ್ಮಿಂದೊಮ್ಮೆಲೇ ಬದಲಾಗತೊಡಗಿತು. ನೇಗಿಲಿನ ಬದಲಾಗಿ ಟ್ರ್ಯಾಕ್ಟರ್ ಮತ್ತು ಟಿಲ್ಲರ್‌ಗಳು, ಗಾಡಿಯ ಬದಲಾಗಿ ಟ್ರಕ್ಕುಗಳು ಬಂದವು. ಇದೆಲ್ಲ ಅನಿವಾರ್ಯವಾಗಿ ಆಯಿತೆಂಬುದೇನೋ ನಿಜ. ಇದರ ಜೊತೆಗೆ ಕುರಿಗೊಬ್ಬರ ಹಾಗೂ ಜೈವಿಕ ಗೊಬ್ಬರದ ಬದಲು ರಾಸಾಯನಿಕ ಗೊಬ್ಬರ ಹೇರಿಕೆಯಾಗತೊಡಗಿತು. 'ಹೂಸಿದವಳು ಯಾರು ಎಂದರೆ ಮಾಸಿದ ಸೀರೆಯವಳು' ಎಂಬಂಥೆ ರಾಸಾಯನಿಕ ಗೊಬ್ಬರವನ್ನು ಉಪಯೋಗಿಸಲಾರದ ರೈತನಿಗೆ ಬೆಳೆ ಚೆನ್ನಾಗುವುದಿಲ್ಲ, ಇಳುವರಿ ಬರುವುದಿಲ್ಲ ಎಂಬ ಅಜ್ಞಾನದಲ್ಲಿ ಕೆಡವಲಾಯಿತು. ಬರಬರುತ್ತಾ ರಸಗೊಬ್ಬರದ

ಅನಿವಾರ್ಯತೆಯನ್ನು ಸೃಷ್ಟಿಸಿ, ದರ ಹೇರುವಂತೆ ಮಾಡಿ ಸಣ್ಣ ರೈತರಿಗೆ ಅದು ದುರ್ಲಭವಾಗುವಂತೆ ಮಾಡಲಾಯಿತು. ರಸಗೊಬ್ಬರ ಉಪಯೋಗಿಸಲಾರದ, ಟ್ರ್ಯಾಕ್ಟರ್ ಟಿಲ್ಲರ್ ಬಳಸಲಾರದ ರೈತ ಕೀಳರಿಮೆಯಿಂದ ತೊಳಲಾಡುವಂತೆ ಮಾಡಲಾಯಿತು. ಒಟ್ಟಾರೆ ಕೃಷಿ ಬಾಬತ್ತು ದುಬಾರಿಯಾಗುವಂತೆ ಮಾಡಿ, ಈ ಕೃಷಿಗಿಂತ ನಗರದ ಆಫೀಸೊಂದರ ಜವಾನನ ಕೆಲಸವೇ ಮೇಲು ಎಂಬ ಭಾವನೆ ಬರುವಂತೆ ಮಾಡಲಾಯಿತು. ಹೀಗೆ ಒಂದು ಜವಾನನ ಕೆಲಸಕ್ಕಿಂತ ಕಡೆಯಾಗಿ, ಮೂಲ ಕಸುಬಿನಿಂದ ಅವನನ್ನು ವಿಮುಖನನ್ನಾಗಿಸಲಾಯಿತು. ಇದರ ಪರಿಣಾಮ ಅಂಥ ತುಂಡು ಜಮೀನು ಗಳು ಮತ್ತೆ ದೊಡ್ಡ ಜಮೀನುದಾರರ ಅಥವಾ ಹಣವುಳ್ಳವರ ಪಾಲಾಗುವಂತಾಯಿತು. ಈ ಮೂಲಕ ಕೃಷಿ ಸಮಾಜವಾದದ ಗೋರಿಯೂ ಆಯಿತು. ಟ್ರ್ಯಾಕ್ಟರು ಟಿಲ್ಲರು ಇಟ್ಟುಕೊಂಡವನು ಮಾತ್ರ ಕೃಷಿ ಮಾಡಬಲ್ಲನೆಂಬ, ಮೂಟೆ ಮೂಟೆ ರಾಸಾಯನಿಕ ಗೊಬ್ಬರ ಕೊಳ್ಳುವವನು ಮಾತ್ರ ಬೆಳೆಯಬಲ್ಲನೆಂಬ ನಂಬಿಕೆ ಬರುವಷ್ಟರ ಮಟ್ಟಿಗೆ ಆಗಿಹೋಗಿದೆ. ನನ್ನ ದೃಷ್ಟಿಯಲ್ಲಿ ಇದು ಕಾಂಕ್ರಿಟ್ ಸಂಸ್ಕೃತಿಯ ಪರೋಕ್ಷ ಪ್ರಭಾವ. ಈ ಸಂದರ್ಭದಲ್ಲಿ ಫುಕುವೋಕಾನಂಥವರು ನಮ್ಮ ನೆನಪಿಗೆ ಬರುತ್ತಾರೆ.

ಕಾಡು ಮತ್ತು ನಾಡಿನ ಮೂಲಕ ಹರಿದ ನೀರಿನಿಂದ ಸಂಗ್ರಹವಾದ ಈ ಜಲಾಶಯಗಳು ಮಂಡ್ಯ, ಭದ್ರಾವತಿ, ಹೊಸಪೇಟೆಗಳಂಥ ಹತ್ತಾರು ಊರುಗಳನ್ನು ನಗರಗಳನ್ನಾಗಿ ಪರಿವರ್ತಿಸಿದವು. ಛಾನೆಲ್ ಹರಿಯುವ ಕಡೆಯಲ್ಲೆಲ್ಲಾ ಮೇಲೆ ಹೇಳಿದ ಕಾಂಕ್ರೀಟಿನ ಅರ್ಥಾತ್ ನಗರಕೇಂದ್ರಿತ ಜೀವನಾನುಭವದ ಪ್ರಭಾವ ಹೆಚ್ಚಾಗತೊಡಗಿತು. ಈ ಕಾಂಕ್ರೀಟಿನ ಪ್ರತಿನಿಧಿಗಳಾಗಿ ಈ ವ್ಯವಸ್ಥೆಯನ್ನು ನಿಯಂತ್ರಿಸಲು ಗುಮಾಸ್ತರುಗಳು ಹುಟ್ಟಿಕೊಂಡರು. ನಮ್ಮ ಸರ್ಕಾರ ಈ ಗುಮಾಸ್ತ ಮನೋಭಾವ ಉಳ್ಳವರನ್ನು ಮತ್ತು ಬಂಡವಾಳಶಾಹಿಗಳನ್ನು ಮಾತ್ರ ಪೊರೆಯುತ್ತಾ ಬಂತು. ಇಂತೆಲ್ಲ ಈ ಆಧುನಿಕ ವ್ಯೂಹದಲ್ಲಿ ಜಾನಪದ ಜಗತ್ತು ತಲ್ಲಣಗೊಳ್ಳುತ್ತಿರುವ ಪರಿಯನ್ನು ನಾವು ಅರ್ಥಮಾಡಿಕೊಳ್ಳಬೇಕಾಗಿದೆ. ಕಾಂಕ್ರೀಟಿನ ಈ ಗೋಳದ ಒಳಗೆ ಜಾನಪದ ಮನಸ್ಸು ಪರಿತಪಿಸುವ, ತನ್ನತನಕ್ಕಾಗಿ ಹುಡುಕಾಡುತ್ತಿರುವ ಈ ಸಂಕಟ ಸ್ಥಿತಿಯಲ್ಲಿ ಅದರ ನೆಲೆ ಬೆಲೆಗಳನ್ನು ವಿವೇಚಿಸಬೇಕಾಗಿದೆ.

**ಅಕ್ಷರ ಮತ್ತು ವಿದ್ಯೆಗಳ ನಡುವಿನ ಸಂಘರ್ಷ**

ಇದುವರೆಗೆ ಹೇಳಿದ್ದು ಭೌತಿಕ ವಿಚಾರವಾಯಿತು. ಆದರೆ ಈ ಕಾಂಕ್ರಿಟ್ ಸಂಸ್ಕೃತಿಯ ಮಾನಸಿಕ ಧೋರಣೆ ಹೇಗೆ ಇಡೀ 'ಜನಪದ' ವನ್ನು ಗುಲಾಮಗಿರಿಗೆ ತಳ್ಳಿದೆ ಎಂಬುದು ಕೂಡ ಅಷ್ಟೆ ಮುಖ್ಯ. ಅಕ್ಷರ ಕಲಿತವರ ಮೇಲರಿಮೆಯಿಂದಾಗಿ ತಾವು ಹೇಳಿದಂತೆ ಅನಕ್ಷರಸ್ತರು ಕೇಳಬೇಕು ಎಂಬ ಅಹಂಕಾರ ಬೆಳೆಯತೊಡಗಿತು. ಒಬ್ಬ ರೈತ ತನ್ನ ಕೃಷಿ

ಕ್ಷೇತ್ರದಲ್ಲಿ ತಾನು ಪಡೆದ ಅನುಭವ, ಮಾಡಿದ ಸಾಧನೆ ಅಥವಾ ಅವನದೇ ಆದ ಸಂಶೋಧನೆ ಈ ಜಗತ್ತಿಗೆ ಮುಖ್ಯವಲ್ಲ. ಒಬ್ಬ ಕಲಾಕಾರ ತಮಟೆಯನ್ನೋ, ದುಡಿಯನ್ನೋ, ಶಹನಾಯಿಯನ್ನೋ ತಯಾರಿಸಿದರೆ ಅದು ಮುಖ್ಯವಲ್ಲ. ತನ್ನ ಎದೆಯಲ್ಲಿ ಏಳು ದಿನ ಏಳು ರಾತ್ರಿ ಕೇಳುವಷ್ಟು ಹಾಡು ಇಟ್ಟುಕೊಂಡ ಗಾಯಕರು ವಿದ್ಯಾವಂತರಲ್ಲ. ಇದೆಲ್ಲ ಕೇವಲ ಅಕ್ಷರ ಕಲಿತಿಲ್ಲ ಎಂಬ ಯಕಶ್ಚಿತ್ ಕಾರಣಕ್ಕೆ. ಏನಾಗಿದೆ ಇಲ್ಲಿ ಅಂದರೆ, ಲಿಟರಸಿ ಅನ್ನುವ ಸಣ್ಣ ವಿಚಾರ ಎಜುಕೇಷನ್ ಅಥವಾ ಎಕ್ಸ್‌ಪೀರಿಯನ್ಸ್ ಎಂಬ ಮಹತ್ವದ ವಿಚಾರಗಳನ್ನು ಆಳತೊಡಗಿದೆ. ಆದ್ದರಿಂದಲೇ ಈ ದೇಶದ ಕೃಷಿ ಇಲಾಖೆಗೂ ಈ ದೇಶದ ಸಂಸ್ಕೃತಿ ಇಲಾಖೆಗೂ, ಈ ದೇಶದ ಶಿಕ್ಷಣ ಇಲಾಖೆಗೂ 'ಐ.ಎ.ಎಸ್'ನವರೇ ಮುಖ್ಯರಾಗುತ್ತಿದ್ದಾರೆ.

'ವಿದ್ಯೆ' ಎಂಬ ಪದದ ಅರ್ಥವನ್ನು 'ಪದವಿ' ಎಂಬ ಅಕ್ಷರ ಕೇಂದ್ರಿತ ಮೌಲ್ಯ ಅಪಹರಿಸಿರುವ ಕಾರಣದಿಂದಾಗಿ ಇಂಥ ದುರಂತ ಉಂಟಾಗಿದೆ. ಅದರಲ್ಲೂ ಅವನು ಹಳ್ಳಿಯವನಾಗಿದ್ದು ಅಕ್ಷರ ಗೊತ್ತಿಲ್ಲದ ಪಕ್ಷದಲ್ಲಿ ಅವನು ಎಂಥ ಪರಮ ಜ್ಞಾನಿಯಾದರೂ ಅವನನ್ನು ಮೂಢ ಎಂದು ಪರಿಗಣಿಸಲಾಗುತ್ತದೆಯೇ ಹೊರತು ಅವನ ಕ್ಷೇತ್ರದಲ್ಲಿ ಅವನು ಪರಿಣಿತ ಎಂದು ಭಾವಿಸುವುದೇ ಇಲ್ಲ. ನಮ್ಮ ಸಾಕ್ಷರತಾ ಆಂದೋಲನದ ಹಲವಾರು ಜಾಹಿರಾತುಗಳು ಅಕ್ಷರ ಕಲಿಯದವನೆಂದರೆ ಅವನು ಜಗತ್ತಿನಲ್ಲಿ ಯಾವುದಕ್ಕೂ ಬೇಡಾದವನು ಎಂಬ ರೀತಿಯಲ್ಲಿ ಚಿತ್ರಿಸುತ್ತವೆ. (ಇಷ್ಟೆಲ್ಲ ಆಗಿಯೂ ಕೇವಲ ಸಹಿ ಮಾಡುವುದುನ್ನು ಕಲಿಸಿ ನೂರಕ್ಕೆ ನೂರು ಸಾಕ್ಷರತೆ ಸಾಧಿಸಿದ್ದೇವೆ ಎಂದು ಬೊಗಳೆ ಬಿಟ್ಟುಕೊಳ್ಳುವ ಅಧಿಕಾರ ವರ್ಗವನ್ನು ನಾವು ಸಹಿಸಿಕೊಳ್ಳಬೇಕಾಗಿದೆ ಎಂಬ ಮಾತು ಬೇರೆ)

ಈ ಮನೋಭಾವದ ಹಿಡಿತ ಎಲ್ಲಿಯವರೆಗೆ ಮುಟ್ಟಿದೆ ಅಂದರೆ ನಗರದ 'ಸುಶಿಕ್ಷಿತ' ಕಲಾವಿದರು ಮಾಡುವ ಮೇಳಗಳಿಗೆ ಜನ ಸೇರಿಸಲು ಜನಪದ ಕಲಾವಿದರ ಮೆರವಣಿಗೆ ಹೊರಡುತ್ತದೆ. ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ನಡೆಯುವ ರಾಜ್ಯೋತ್ಸವಕ್ಕೆ ಜನ ಸೇರಿಸಲು ರಸ್ತೆಯಲ್ಲಿ ನಿಂತ ಡೊಳ್ಳು ಮತ್ತು ಪಟಾ ಕುಣಿತದ ಕಲಾವಿದರು ಮುಕ್ಕಿರಿದು ಕುಣಿಯಬೇಕಾಗುತ್ತದೆ. ಸಾಹಿತ್ಯ ಸಮ್ಮೇಳನಗಳ ಪಂಡಿತೋತ್ತಮ ಅಧ್ಯಕ್ಷರುಗಳ ಮೆರವಣಿಗೆಗಳು ವಿಜೃಂಭಿಸಬೇಕಾದರೆ ಈ ಕಲಾವಿದರು ಬೆವರು ಸುರಿಸಬೇಕಾಗುತ್ತದೆ. ಮಂತ್ರಿಯೊಬ್ಬ ಊರಿಗೆ ಬಂದಾಗ ಅವನನ್ನು ಖುಷಿಪಡಿಸುವ ಅಧಿಕಾರಶಾಹಿ ಹುನ್ನಾರಿಗೆ ಕೂಡ ಜನಪದ ಕಲಾವಿದರೇ ಬೇಕಾಗುತ್ತಾರೆ. ಇಂಥ ರಾಜಕೀಯ ಅವಶ್ಯಕತೆಗಳನ್ನು ಪೂರೈಸುವ ಸಲುವಾಗಿಯೇ ನಮ್ಮ ಅಕಾಡೆಮಿಗಳು ಸಂಸ್ಕೃತಿ ಇಲಾಖೆಗಳು ಮತ್ತು ದೇಶದ ತುಂಬಾ ಇರುವ ವಲಯ ಮಟ್ಟದ ಸಾಂಸ್ಕೃತಿಕ

ಕೇಂದ್ರಗಳನ್ನು ಹುಟ್ಟು ಹಾಕಲಾಗಿದೆಯೇನೋ ಎಂಬ ಗುಮಾನಿ ಹುಟ್ಟುತ್ತದೆ. ಕೋಟ್ಯಂತರ ಹಣ ಸುರಿಯುವ ಅನೇಕ ಸಾಂಸ್ಕೃತಿಕ ಉತ್ಸವಗಳ ಹಿಂದಿನ ರಾಜಕೀಯ ಮೆದುಳು ಇದಕ್ಕಿಂತ ಭಿನ್ನವಾದುದೇನೂ ಅಲ್ಲ ಎಂಬ ಅನುಭವ ನನಗಂತೂ ಆಗಿದೆ. ಹೀಗೆ ಸುಖಕೇಂದ್ರಿತ ವಲಯದ ಜನ ಜ್ಞಾನಕೇಂದ್ರಿತ ವಲಯದ ಜನರನ್ನು ನಿಕೃಷ್ಟವಾಗಿ ಕಾಣುತ್ತ ಅವರಲ್ಲಿ ಕೀಳರಿಮೆಯ ಸಂಕಟವನ್ನು ಹುಟ್ಟುಹಾಕಿರುವ ವಿಪರ್ಯಾಸ ಕಲಿತವರ ಅಜ್ಞಾನಕ್ಕೆ ಕನ್ನಡಿಯಾಗುತ್ತದೆ.

ಹೀಗೆ 'ಅನುಭವ' ಎಂಬ ಜಾನಪದವನ್ನು 'ಅಕ್ಷರ' ಎಂಬ ಅಹಂಕಾರದ ಸಂಕೇತ ಆಳುತ್ತಿರುವ ಈ ಸಂದರ್ಭದಲ್ಲಿ ಖಂಡಿತ ಅನುಭವ ಸೋಲುತ್ತಿದೆ. ಈ ಸೋಲೆ ನಮ್ಮ ಸಂಸ್ಕೃತಿಯ ಸೋಲು ಕೂಡ. ಇನ್ನೂ ಸ್ಪಷ್ಟಪಡಿಸಬೇಕೆಂದರೆ ಕಾಡಿನ ಸಂಕೇತವಾದ ಜಾನಪದ ಸೋಲುತ್ತಿದ್ದು ಕಾಂಕ್ರಿಟ್ ಸಂಕೇತವಾದ ಅಕ್ಷರ ಸಂಸ್ಕೃತಿ ದಿಗ್ವಿಜಯದ ಹಾದಿಯಲ್ಲಿದೆ.

ಏನನ್ನೂ ಸೃಷ್ಟಿಸಲಾರದ ಕಾಂಕ್ರೀಟ್ ಸಂಸ್ಕೃತಿ ಕೇವಲ ಭೋಗಿಸುವ ಸ್ಥಿತಿಯಲ್ಲಿದ್ದು ಎಲ್ಲವನ್ನೂ ಸೃಷ್ಟಿಸಬಹುದಾದ ಕಾಡಿನ ಸಂಸ್ಕೃತಿ ಏನನ್ನೂ ಭೋಗಿಸಲಾರದ ಸ್ಥಿತಿಯಲ್ಲಿದೆ. ಇಂಥ ಗಂಭೀರ ಸಂದರ್ಭದಲ್ಲಿ ಕಾಡಿನ ಸಂಸ್ಕೃತಿಗೆ ಬದುಕುವ ಛಲ ತುಂಬಬೇಕಾಗಿದೆ. ಆಕ್ರಮಣಕ್ಕೆ ಒಳಗಾದವನು ಅದೇ ಆಕ್ರಮಣಕಾರನನ್ನು ಪರಿವರ್ತಿಸುವಂಥ ಶಕ್ತಿಯನ್ನು ಪಡೆದುಕೊಳ್ಳಬೇಕಾಗಿದೆ. ನನ್ನ ದೃಷ್ಟಿಯಲ್ಲಿ ಇದಕ್ಕೆ ಎರಡು ರೀತಿಯ ವ್ಯಕ್ತಿಗಳು ಬೇಕಾಗುತ್ತಾರೆ. ಒಬ್ಬ: ಆಧುನಿಕ ತಂತ್ರಜ್ಞಾನವನ್ನು ನಿರಾಕರಿಸಿ ಪರಂಪರೆಯ ಜ್ಞಾನವನ್ನು ಎತ್ತಿ ಹಿಡಿದ ಫುಕುವೋಕಾ. ಇನ್ನೊಬ್ಬ: ಸೋತ ಸಂಸ್ಕೃತಿಗಳ ನಡುವೆ ಬದುಕುವ ಛಲ ತುಂಬಿ ಕಾಡಿನ ಶಕ್ತಿಯನ್ನು ಎತ್ತಿ ಹಿಡಿದ ವೆರಿಯರ್ ಎಲ್ವಿನ್.

# ಕನ್ನಡ ಸಾಹಿತ್ಯ: ಬೇರು, ಕಾಂಡ ಮತ್ತು ಚಿಗುರು

ಡಾ. ಕೆ. ವಿ. ನಾರಾಯಣ

ಈ ತಲೆಬರಹವನ್ನು ಓದಿದಾಗ ಯಾರಿಗಾದರೂ ನಗುಬರುವುದು ಸಹಜ. ನಗೆಗೆ ಮುಖ್ಯ ಕಾರಣ: ಬೇರು, ಕಾಂಡ ಮತ್ತು ಚಿಗುರುಗಳ ಸಾತತ್ಯವನ್ನು ಸಾಹಿತ್ಯಕೃತಿಗಳ ಸಂಬಂಧದಲ್ಲಿ ಕಾಣಲು ಹೊರಡುವುದು, ವಿಷಯವನ್ನು ಆಕರ್ಷಕವಾಗಿಸಲು ನಡೆಸುವ ಯತ್ನವೆಂದು ತಿಳಿಲಾಗುವುದು. ಆದರೆ ಈ ಮಾದರಿಯನ್ನು ಆಯ್ದುಕೊಳ್ಳಲು ಬೇರೆಯೇ ಕಾರಣಗಳಿವೆ. ಬೇರು, ಕಾಂಡ ಮತ್ತು ಚಿಗುರುಗಳು ಕೇವಲ ಕಾಲದ ಸಾತತ್ಯವನ್ನು ಮಾತ್ರ ಪ್ರತಿನಿಧಿಸುವುದಿಲ್ಲ. ಅವುಗಳ ನಡುವೆ ಇರುವ ಜೈವಿಕ ಸಂಬಂಧದ ಸ್ವರೂಪ ಆವರ್ತನಶೀಲವಾಗಿದೆ. ಅಲ್ಲದೆ ಒಂದು ಇನ್ನೊಂದನ್ನು ಅವಲಂಬಿಸುವ ಬಗೆಯನ್ನು ಪ್ರಕಟಿಸುತ್ತದೆ. ಸದ್ಯ ಕನ್ನಡ ಸಾಹಿತ್ಯವನ್ನು ನೋಡಲು ಈ ಎರಡು ಅಂಶಗಳು ಅವಶ್ಯವೆಂದು ತೋರಿದ್ದರಿಂದ ಈ ಮಾದರಿಯನ್ನು ಆಯ್ದುಕೊಳ್ಳಲಾಗಿದೆ.

ಇಂಗ್ಲಿಶ್ ಆಳ್ವಿಕೆ ಮತ್ತು ಇಂಗ್ಲಿಶ್ ವಿದ್ಯಾಭ್ಯಾಸಗಳು ನಮಗೇನು ಮಾಡಿದವು ಎಂಬ ಪ್ರಶ್ನೆಯನ್ನು ಕುರಿತು ಚರ್ಚೆಗಳು ನಡೆಯುತ್ತಲೇ ಇವೆ. ಕೆಲವು ಒಳ್ಳೆಯ ಪರಿಣಾಮಗಳು ಕೆಲವು ಕೆಟ್ಟ ಪರಿಣಾಮಗಳು ಚರ್ಚೆಯಲ್ಲಿ ಮಂಡಿತವಾಗುತ್ತಿವೆ. ಒಟ್ಟಾರೆ ಸಾಮಾಜಿಕವಾಗಿ ಹಲವಾರು ಪಲ್ಲಟಗಳು ನಡೆದಿವೆ ಎಂಬುದನ್ನು ಯಾರೂ ಒಪ್ಪಬೇಕಾಗಿದೆ. ಆದರೆ ಈ ಪಲ್ಲಟಗಳ ಸ್ವರೂಪವನ್ನು ನಾವಿನ್ನೂ ಸರಿಯಾಗಿ ಗ್ರಹಿಸಿಲ್ಲವೇನೋ. ಇಂಗ್ಲಿಶ್ ವಿದ್ಯಾಭ್ಯಾಸದ ಪರಿಣಾಮವಾಗಿ, ಇಪ್ಪತ್ತನೇ ಶತಮಾನದ ತಿರುವಿನಲ್ಲಿ ನಿಂತ ನಾವು, ನಮ್ಮ ಸಂಸ್ಕೃತಿಯ ಮೂಲಕ ಲೋಕವನ್ನು ಗ್ರಹಿಸುವ ವಿಧಾನದಲ್ಲಿ ಒಂದು ಮುಖ್ಯ ಪಲ್ಲಟವನ್ನು ತಂದುಕೊಂಡಂತೆ ತೋರುತ್ತದೆ. ಕಾಲ ದೇಶಗಳನ್ನು ಕಲೆಯಲ್ಲಿ ಮಂಡಿಸುವ ನಮ್ಮ ಪಾರಂಪರಿಕ ಕ್ರಮದ ಬಗೆಗೆ ನಮಗೆ ಸಂದೇಹಗಳು ಪ್ರಾರಂಭವಾದವು. ದೇಶವನ್ನು ಮೂರನೆಯ ಆಯಾಮದಲ್ಲಿ ಚಿತ್ರಿಸುವ ಚಿತ್ರಕಲೆಗೆ ಮನ್ನಣೆ ಬಂತು. ಉದ್ದ ಅಗಲಗಳ ಜತೆಗೆ ಆಳದ ಭ್ರಮೆಯನ್ನು ನಾವು ಚಿತ್ರಗಳಲ್ಲಿ ಒಪ್ಪಲಾರಂಭಿಸಿದೆವು. ಉದ್ದ ಮತ್ತು ಅಗಲಗಳು ಮಾತ್ರ ಇದ್ದ ಎರಡು ಆಯಾಮಗಳ ನಮ್ಮ ಪ್ರಾಚೀನ ಪರಂಪರೆಯ ಚಿತ್ರಕಲೆ ಕೇವಲ ಜನಪದ ಕಲೆಯಾಗಿ

ಮಾತ್ರ ಉಳಿಯಿತು. ಹಾಗೆಯೇ ಕಾಲವನ್ನು ಭೂತ, ವರ್ತಮಾನ ಮತ್ತು ಭವಿಷ್ಯತ್‌ಗಳ ಸರಣಿಯೆಂಬಂತೆ ಹಾಗೂ ಏಕಮುಖಿಯಾದ ಚಲನೆಯಲ್ಲಿ ಮಾತ್ರ ಗ್ರಹಿಸುವ ವಿಧಾನ ರೂಢಿಗೆ ಬಂತು. ಪುರಾಣದ ಕಥನ ಕ್ರಮವನ್ನು ಸಂಶಯದಿಂದ ನೋಡ ತೊಡಗಿದೆವು. ನಮ್ಮ ಪಾರಂಪರಿಕ ಕಥನ ಕ್ರಮದ ಸಾಧ್ಯತೆಗಳು ದೂರ ಉಳಿದವು. ಹೆಚ್ಚು ವಾಸ್ತವವಾದಿ ವಿಧಾನಗಳನ್ನು ನೆಮ್ಮ ತೊಡಗಿದೆವು. ವಿಜ್ಞಾನವನ್ನು ನಾವು ಬರಮಾಡಿಕೊಂಡ ಕ್ರಮವೇ ಹೀಗೆ. ವಿಜ್ಞಾನ, ಲೋಕವನ್ನು ವಿವರಿಸುವ ಗುತ್ತಿಗೆಯನ್ನು ಪಡೆದಿದೆ ಹಾಗೂ ಆ ಗುತ್ತಿಗೆ ವಿಜ್ಞಾನಕ್ಕೆ ಮಾತ್ರ ದಕ್ಕಿದೆಯೆಂದು ತಿಳಿದ ನಾವು, ನಮ್ಮ ಗ್ರಹಿಕೆಯ ಇನ್ನುಳಿದ ಮಾರ್ಗಗಳನ್ನು ಸಂಪೂರ್ಣವಾಗಿ ಮುಚ್ಚಿಕೊಂಡೆವು. ಅಥವಾ ಕದ್ದುಮುಚ್ಚಿ ಬಳಸತೊಡಗಿದೆವು.

ಈ ಹೊಸ ಗ್ರಹಿಕೆಯ ವಿಧಾನ ನಮ್ಮ ಸಹಜ ಬೆಳವಣಿಗೆಯಾಗಿರಲಿಲ್ಲ. ಹಾಗಾಗಿ ಅದನ್ನು ಬಳಸುವ ನಮಗೆ ಒಂದೆಡೆ ಅಳುಕು, ಹಿಂಜರಿಕೆ. ಇನ್ನೊಂದೆಡೆ ಹೊಸ ವಿಧಾನವನ್ನು ಹೊತ್ತು ಮೆರೆಸುವ ತವಕ. ಅಳುಕು ಹಿಂಜರಿಕೆಗಳಿಂದ ಮೊದಲ ಬಾರಿಗೆ ಚಪ್ಪಲಿ ತೊಟ್ಟ ಹೆಂಗಸು ಅದನ್ನು ಸೀರೆಯ ನಿರಿಗೆಯ ಮರೆಯಲ್ಲಿ ಯಾರಿಗೂ ಕಾಣಿಸದಂತೆ ಬಚ್ಚಿಟ್ಟುಕೊಳ್ಳುವ ತೆರದಲ್ಲಿ ನಾವು ವಾಸ್ತವವಾದಿ ಮಾರ್ಗವನ್ನು ಬಳಸ ತೊಡಗಿದೆವು. ಹೊತ್ತು ಮೆರೆಸುವ ತವಕದಿಂದ ನಿರೂಪಣೆಯಲ್ಲಿ ಹತ್ತಾರು ಬದಲಾವಣೆಗಳನ್ನು ಮಾಡಿಕೊಳ್ಳತೊಡಗಿದೆವು. ಇವೆಲ್ಲವನ್ನು ಈ ಶತಮಾನದ ನಮ್ಮ ಮೊದಮೊದಲ ಕೃತಿಗಳಲ್ಲಿ ನೋಡಬಹುದು.

ಅಳುಕು ಹಿಂಜರಿಕೆಗಳು ಬೇರೊಂದು ರೀತಿಯಲ್ಲಿಯೂ ಪರಿಣಾಮ ಮಾಡತೊಡಗಿದವು. ನಮ್ಮಲ್ಲಿ ಒಂದು ಬಗೆಯ ನೈಚ್ಯಾನುಸಂಧಾನ ಮೂಡ ತೊಡಗಿತು. ನಮ್ಮದೆಲ್ಲವೂ ತಿರಸ್ಕಾರಕ್ಕೆ ಯೋಗ್ಯವಾದುದು: ಹಲವಾರು ಶತಮಾನಗಳ ಮೌಢ್ಯವನ್ನು ಕಳೆದು ಹೊಸಯುಗದ ಕಡೆಗೆ ನಡೆಯುವುದು ನಮ್ಮೆಲ್ಲರ ಹೊಣೆ ಎಂದು ತಿಳಿದೆವು. ನಮ್ಮ ನಂಬಿಕೆಯ ಜಗತ್ತು ಛಿದ್ರಗೊಳ್ಳುವ ಮೂಲಕ ಮುಂದಿನ ತಲೆಮಾರು ಎಂಥ ಅನಾಥ ಸ್ಥಿತಿಗೆ ತಲುಪಬಹುದೆಂಬ ಕಾಳಜಿಯೂ ಇಲ್ಲದಂತೆ ಎಲ್ಲವನ್ನೂ ತೊಳೆದುಕೊಳ್ಳಲು ಸನ್ನದ್ಧರಾದೆವು. ಹಳೆಯದೆಲ್ಲವೂ ಈಗ ಸಾಮಗ್ರಿ ಮಾತ್ರವಾಗಿ ಕಾಣ ತೊಡಗಿತು. ಯಾವುದು ಜೀವನಕ್ರಮದ ಭಾಗವಾಗಿತ್ತೋ ಅದು ಕೇವಲ ವಸ್ತು ಮಾತ್ರವಾಗಿ ಅಭ್ಯಾಸಯೋಗ್ಯ ಸಾಮಗ್ರಿಯಾಗ ತೊಡಗಿತು. ಅಥವಾ ಹೀಗೂ ಹೇಳ ಬಹುದು. ಒಂದೆಡೆ ಜೀವನದ ಲಯಗಳೊಡನೆ ಬೆರೆತದ್ದು, ಇನ್ನೊಂದೆಗೆ ಕಲಿತವರಿಗೆ ಕೇವಲ ಅಧ್ಯಯನಕ್ಕೆ ವಸ್ತುವಾಯಿತು. ಚರಿತ್ರೆಯ ನಮ್ಮ ಪರಿಕಲ್ಪನೆಗೆ ಈ ಸಾಮಗ್ರಿಗಳು ಪೂರಕವಾಗಿ ಕೆಲಸಮಾಡತೊಡಗಿದವು. ಚರಿತ್ರೆ ಎಂದರೆ ಆಗಿಹೋದದ್ದು ಎಂದು ತಿಳಿದು

ಆ ಚರಿತ್ರೆಯನ್ನು ಬರೆಯಲು ಸನ್ನದ್ಧರಾದೆವು. ಈ ಬರೆವಣಿಗೆಗೆ ಅವಶ್ಯವೆಂಬಂತೆ ನಾವು ನಮ್ಮ ಸಂಸ್ಕೃತಿಯ ಜೀವಂತ ನೆಲೆಗಳೆಲ್ಲವನ್ನು ಕತ್ತರಿಸಿ ಸಾಮಗ್ರಿಗಳನ್ನಾಗಿ ಮಾಡಿಕೊಟ್ಟೆವು.ಇದೆಲ್ಲವೂ ಹಲವು ದಶಕಗಳವರೆಗೆ ಸಾಗಿ ಬಂತು.

ಸ್ವಾತಂತ್ರ್ಯ ಬಂದಮೇಲೆ ಅಥವಾ ಅಧಿಕಾರ ಹಸ್ತಾಂತರವಾದ ಮೇಲೆ ನಮ್ಮ ಸಮಸ್ಯೆಗಳು ಬೇರೆ ರೀತಿಯಲ್ಲಿ ನಮ್ಮನ್ನು ಕಾಡ ತೊಡಗಿದವು. ನಮ್ಮ ಪ್ರಗತಿಯ ಮಾದರಿಯನ್ನು ನಾವು ಆಯ್ಕೆ ಮಾಡಿಕೊಳ್ಳಬೇಕಿತ್ತು. ಲಭ್ಯವಿದ್ದ ಮಾದರಿಗಳಲ್ಲಿ ನಮ್ಮದೆಂಬ ಮಾದರಿಯೊಂದನ್ನು ಕಟ್ಟಿಕೊಂಡೆವು. ಈ ಮಾದರಿಯ ಹಲವು ಲಕ್ಷಣಗಳಲ್ಲಿ ಪ್ರಜಾಪ್ರಭುತ್ವವೂ ಒಂದು. ವಿಚಿತ್ರವೆಂದರೆ ಪ್ರಜಾಪ್ರಭುತ್ವ ನಮ್ಮ ಚಿಂತನೆಯ, ಲೋಕಗ್ರಹಿಕೆಯ ಭಾಗವಾಗಲೇ ಇಲ್ಲ. ಆಶಯದ ನೆಲೆಯಲ್ಲಿ ಸರ್ವಸಮಾನತೆಯನ್ನು ಒಪ್ಪಿದ ನಾವು ಆಚರಣೆಯಲ್ಲಿ ಅದಕ್ಕಿಂತ ಭಿನ್ನರಾಗಿದ್ದೆವು. ನಮ್ಮ ಕಲೆ, ಸಾಹಿತ್ಯಗಳಂತೂ ಪ್ರಜಾಪ್ರಭುತ್ವವನ್ನು ಅರಗಿಸಿಕೊಳ್ಳಲೇ ಇಲ್ಲ. ಕನ್ನಡದ ಮಟ್ಟಿಗಂತೂ ಸಾಹಿತ್ಯ ಜಗತ್ತು ಉತ್ಕೃಷ್ಟತೆಯ ಆರಾಧನೆಯನ್ನು ಮಾಡತೊಡಗಿತ್ತು. ಶ್ರೇಷ್ಠವಾದದ್ದು ಮಾತ್ರ ಗೌರವಕ್ಕೆ ಅರ್ಹವಾದದ್ದು ಎಂಬ ತಿಳುವಳಿಕೆ ಗಾಢವಾಗಿತ್ತು. ಕಲಾಕೃತಿಯಲ್ಲಿ ಸಾವಯವ ಸಮಗ್ರೀಕರಣವನ್ನು ಸಾಧಿಸಬೇಕೆಂಬ ಹಂಬಲ, ಹುತ್ತಗಟ್ಟದೆ ಚಿತ್ತ ರಾಮಾವತಾರವನ್ನು ಕಟ್ಟಲಾರದೆಂಬ ಭಾವ ನಮ್ಮ ಕಲಾಜಗತ್ತನ್ನು ದಟ್ಟವಾಗಿ ಆವರಿಸ ತೊಡಗಿತ್ತು. ಮೇಲು ನೋಟಕ್ಕೆ ಇದು ಕೇವಲ ನವ್ಯಸಾಹಿತ್ಯದ ನೆಲೆ ಎಂದು ತಿಳಿಯಲು ಸಾಧ್ಯವಿದೆ. ಆದರೆ ಆಧುನಿಕ ಕನ್ನಡ ಸಾಹಿತ್ಯದ ಪ್ರಧಾನ ನೆಲೆಯಾಗಿ ಮಂಡಿತವಾಗುವ ಮಾನವತಾವಾದದ ಮೂಲಗಳನ್ನು ನಾವು ಪರಿಶೀಲಿಸಿ ನೋಡೋಣ. ಅಲ್ಲಿ ನಿರೂಪಿತವಾಗುವ ಮಾನವತಾವಾದ ಮುಖ್ಯವಾಗಿ ಮಾನವ ಕೇಂದ್ರಿತವಾದುದು. ಪರಿಸರದಿಂದ ಅನ್ಯನಾದ ಮಾನವನ ಜಗತ್ತನ್ನು ಅಧಿಕೃತಗೊಳಿಸುವ ವಿಧಾನಗಳು ದಟ್ಟವಾಗಿವೆ. ಶಿವರಾಮ ಕಾರಂತ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಇವರ ಗದ್ಯ ಸಾಹಿತ್ಯವನ್ನು ಈ ನಿಟ್ಟಿನಿಂದ ಮತ್ತೊಮ್ಮೆ ನೋಡುವ ಅವಶ್ಯಕತೆ ಇದೆ. ಮನುಷ್ಯನ ಘನತೆಯನ್ನು ಎತ್ತಿ ಹಿಡಿಯುವ ಈ ಸಾಹಿತ್ಯದ ಹಿಂದಿರುವ ಮನುಷ್ಯನ ಪರಿಕಲ್ಪನೆ ಜೀವ ಸಂಕುಲದ ಅಂಗವಾಗಿರುವ ಮಾನವನನ್ನು ಕುರಿತಿಲ್ಲ. ಆ ಸಂಕುಲದಿಂದ ಬೇರೆಯಾಗಿದ್ದು, ಅತ್ಯುನ್ನತ ಮೌಲ್ಯಗಳನ್ನು ಸಾಧಿಸಲು ಹವಣಿಸುತ್ತಿರುವ ಮಾನವನನ್ನು ಕುರಿತಿದೆ.

**ಎಲ್ಲಿ ನಿಂತಿದ್ದೇವೆ?**

ಎಲ್ಲ ಪುರಾಣಗಳ ನಿರಾಕರಣೆ: ವಾಸ್ತವಮಾರ್ಗದ ಬೆನ್ನು ಹತ್ತಿ ಪುರಾಣಗಳ ಗ್ರಹಿಕೆಯನ್ನು ಸಾಹಿತ್ಯಕೃತಿಗಳಿಂದ ದೂರವಿರಿಸಿದ್ದೇವೆ. ಒಂದು ವೇಳೆ ಅಂಥ

ಗ್ರಹಿಕೆಯೊಂದು ಕೃತಿಯಲ್ಲಿ ಮೈತಳೆದರೂ ಅದನ್ನು ವಾಸ್ತವ ಜಗತ್ತಿನ ಚೌಕಟ್ಟಿಗೆ ಹೊಂದಿಸಿ ವಿವರಿಸಲು ಅವಶ್ಯವಾದ ಎಲ್ಲ ವಿಮರ್ಶಾ ಪರಿಕರಗಳನ್ನು ಸಿದ್ಧಪಡಿಸಿಕೊಂಡಿದ್ದೇವೆ. ವಿಜ್ಞಾನದ ಸಾಧನೆಗಳ ಬಗೆಗೆ ಅಪೂರ್ವವಾದ ಗೌರವ ಬೆಳೆದಿದೆ.ಭೌತ ವಿಜ್ಞಾನದ ಬೆಳವಣಿಗೆಯ ಒಂದು ಹಂತದಲ್ಲಿ ಆಕಾರಪಡೆದ ಜಗತ್ತನ್ನು ಯಾಂತ್ರೀಕೃತ ಮಾದರಿಯಲ್ಲಿ ಗ್ರಹಿಸುವ ನ್ಯೂಟನ್ ಪ್ರಣೀತ ಮಾರ್ಗಕ್ಕೆ ಜೋತುಬಿದ್ದಿದ್ದೇವೆ. ಜೀವವಿಜ್ಞಾನದಲ್ಲಿ ಡಾರ್ವಿನ್ ಪ್ರಣೀತ ವಿಕಾಸವಾದದ ಮಾದರಿಯನ್ನು ಪ್ರಶ್ನಾತೀತವಾಗಿ ಒಪ್ಪಿಕೊಂಡಿದ್ದೇವೆ. ಇವೆರಡೂ ನಮ್ಮ ಸಾಹಿತ್ಯ ಕೃತಿಗಳ ಹಿಂದಿನ ಲೋಕ ಗ್ರಹಿಕೆಗಳನ್ನು ನಿಯಂತ್ರಿಸುತ್ತಿವೆ.

ಮೊದಲ ಚೌಕಟ್ಟು ನಮ್ಮನ್ನು ಐಂದ್ರಿಯಿಕ ಅನುಭವಗಳನ್ನು ಮಾತ್ರ ಪ್ರಮಾಣವೆಂದು ಪರಿಗಣಿಸಲು ಒತ್ತಾಯಿಸುತ್ತವೆ. ಅಂದರೆ ಸಾಹಿತ್ಯಕೃತಿಗಳ ಹಿಂದೆ ಕೃತಿಕಾರನ ವಾಸ್ತವ ಅನುಭವಗಳು ಒತ್ತಾಸೆಯಾಗಿ ನಿಲ್ಲಬೇಕೆಂಬ ವಾದವನ್ನು ಎಲ್ಲಿಯವರೆಗೆ ಎಳೆದು ತಂದಿದ್ದೇವೆಂದರೆ ಬರವಣಿಗೆಗೆ ಪೂರ್ವಭಾವಿಯಾಗಿ ಬರಹಗಾರನಲ್ಲಿ ಅನುಭವಗಳು ಸನ್ನದ್ಧಗೊಳ್ಳದಿದ್ದರೆ ಆ ವ್ಯಕ್ತಿಯ ಕೃತಿಯು ಅಪ್ರಾಮಾಣಿಕವೆಂದು ಕರೆಯಲು ಹಿಂಜರಿಯುತ್ತಿಲ್ಲ. ಕೃತಿಯಲ್ಲಿ ಅಧಿಕೃತತೆ ಎಂದರೆ ಕೃತಿಕಾರನ ಅನುಭವಗಳ ಅಧಿಕೃತತೆ ಎಂದೇ ತಿಳಿಯಲಾಗುತ್ತಿದೆ.

ಎರಡನೆಯ ಚೌಕಟ್ಟು ಬೆಳವಣಿಗೆಯನ್ನು ವಿಕಾಸವೆಂದೂ ಅದನ್ನೇ ಚರಿತ್ರೆಯೆಂದೂ ತಿಳಿಯಲು ಒತ್ತಾಯಿಸುತ್ತದೆ. ಅಂದರೆ ಸಾಹಿತ್ಯಕೃತಿಗಳನ್ನು ವಿಕಸನಶೀಲತೆಯ ಮಾದರಿಯಲ್ಲಿ ನೋಡುವ ವಿಧಾನವೊಂದು ಬೆಳೆಯುವಂತಾಗಿದೆ. ಕೃತಿಯಲ್ಲಿ ಜಗತ್ತನ್ನು ಮಂಡಿಸುವ ವಿಧಾನ ಹಾಗೂ ಆ ಜಗತ್ತನ್ನು ವಿಮರ್ಶೆಯಲ್ಲಿ ವಿವರಿಸುವ ವಿಧಾನ ಇವೆರಡೂ ಈ ರೇಖಾತ್ಮಕ ವಿಕಸನಶೀಲತೆಯ ನೆರಳಿನಲ್ಲಿ ಬೆಳೆದಿವೆ. ಪರಂಪರೆ ಮತ್ತು ವ್ಯಕ್ತಿಪ್ರತಿಭೆಗಳ ಸಂಬಂಧವನ್ನು ವಿವರಿಸುವಾಗ ಟಿ. ಎಸ್. ಎಲಿಯಟ್ ಜಾರಿಗೊಳಿಸಿದ ಈ ಮಾದರಿಯನ್ನು ಪ್ರಶ್ನಿಸದೆ ಒಪ್ಪಿಕೊಂಡುಬಿಟ್ಟಿದ್ದೇವೆ. ಪಂಪನನ್ನು ಓದುವುದು ಏಕೆಂದರೆ ಪಂಪನ ಜತೆಗಾರನಾಗುವುದಕ್ಕಲ್ಲ, ಪಂಪನನ್ನು ಮೀರಿ ಬೆಳೆಯುವುದಕ್ಕೆ ಎಂದು ತಿಳಿಯಲಾಗುತ್ತಿದೆ.

ಮೇಲೆ ಸೂಚಿಸಿದ ಇನ್ನೊಂದು ಸಂಗತಿಯನ್ನು ಇನ್ನು ಮುಂದೆ ವಿವರವಾಗಿ ಗಮನಿಸಬಹುದು. ಪ್ರಜಾಪ್ರಭುತ್ವದ ಚೌಕಟ್ಟನ್ನು ಆರಿಸಿಕೊಂಡರೂ ಸಾಹಿತ್ಯದಲ್ಲಿ ನಾವು ವ್ಯಕ್ತಿಯ ವಿಶಿಷ್ಟತೆ ಹಾಗೂ ವಿಭಿನ್ನತೆಗಳನ್ನು ಪ್ರತಿಪಾದಿಸುತ್ತಾ ಬಂದಿದ್ದೇವೆ. ಹಾಗೆ ನೋಡಿದರೆ ನಮ್ಮ ಪ್ರಜಾಪ್ರಭುತ್ವದ ಆಚರಣೆಯೂ ವ್ಯಕ್ತಿಯ ಸಮಾನತೆಯನ್ನು ನೂರಕ್ಕೆ ನೂರು ಪ್ರಮಾಣದಲ್ಲಿ ಸಾಧಿಸಿ ತೋರಿಸುವಂತದಾಗಿಲ್ಲ. ಅಂದರೆ ಆರೆಬರೆ

ಪ್ರಜಾಪ್ರಭುತ್ವದ ಚೌಕಟ್ಟಿನಲ್ಲಿಯೂ ನಾವು ಅದರ ಸುಳಿವನ್ನು ಸಾಹಿತ್ಯ ಕೃತಿಗಳ ವಲಯದಿಂದ ಹೊರಗಿರಿಸಿದ್ದೇವೆ. ಈ ಮಾತು ಆರೋಪದಂತೆ ತೋರಬಹುದು. ಆದರೆ ವಿಚಾರಿಸಿ ನೋಡಿದರೆ ಇದು ಆರೋಪವಲ್ಲ; ವಾಸ್ತವವೆಂಬುದು ತಿಳಿಯುತ್ತದೆ. ಏಕೆಂದರೆ ಪ್ರಜಾಪ್ರಭುತ್ವ ನಿರೀಕ್ಷಿಸುವುದು ಕೊಟ್ಟುಕೊಳ್ಳುವ ಮಾನವರನ್ನು; ಕಟ್ಟಿಕೊಳ್ಳುವ ಮಾನವರನ್ನಲ್ಲ. ಆದರೆ ನಮ್ಮ ಸಾಹಿತ್ಯಕೃತಿಗಳು ಆರಾಧಿಸಿದ ಪಾತ್ರಗಳು ಅನುಭವದ ಮೂಸೆಯಲ್ಲಿ ಬೆಂದು ಅರಳುತ್ತವೆ. ತಮ್ಮ ಆಂತರಿಕ ಸಾಮರ್ಥ್ಯವನ್ನು ಪ್ರಕಟಿಸಲು ಅವಕಾಶಗಳನ್ನು ಕಾಯುತ್ತಿರುತ್ತವೆ. ಪ್ರಜಾಪ್ರಭುತ್ವ ತನ್ನ ಆತ್ಯಂತಿಕ ಸ್ಥಿತಿಯಲ್ಲಿ ಎಲ್ಲ ಕಲೆಗಳನ್ನೂ ನಿರಾಕರಿಸುತ್ತದೆಯೆಂದು ವಾದಿಸುವುದಾದರೆ ಆ ಮಾತು ಬೇರೆ. ಸದ್ಯ ನನ್ನ ಗಮನದಲ್ಲಿರುವುದು ರಾಜಕೀಯ ನಂಬಿಕೆ ಮತ್ತು ಸಾಂಸ್ಕೃತಿಕ ಆಚರಣೆಗಳ ನಡುವೆ ಉಂಟಾಗಿರುವ ಕಂದರದ ಸ್ವರೂಪ ಮಾತ್ರ.

ಈ ಕಂದರವನ್ನು ನಿರಾಕರಿಸಲು ಅವಶ್ಯವಿರುವ ಸಾಹಿತ್ಯ ತತ್ವಗಳನ್ನು ರೂಪಿಸಿಕೊಳ್ಳಲಾಗಿದೆ. ಸಾಹಿತ್ಯಕೃತಿಯ ಸೃಷ್ಟಿಯ ಅವಕಾಶಗಳನ್ನು ವಿಸ್ತರಿಸುವುದು ಈ ತತ್ವದ ನೆಲೆಗಳಲ್ಲಿ ಒಂದಾಗಿದೆ. ಪ್ರತಿಭೆಯನ್ನು ಅತಿವಿಶಿಷ್ಟಗೊಳಿಸುವ ವಾದವನ್ನು ನಿರಾಕರಿಸಿ ಜೀವನಾನುಭವದ ಗಾಢತೆಯೇ ಸಾಹಿತ್ಯಕೃತಿಯ ಸೃಷ್ಟಿಗೆ ಅವಶ್ಯವಿರುವ ಸಾಮರ್ಥ್ಯವನ್ನು ಒದಗಿಸುತ್ತದೆಂದು ತಿಳಿಯಲಾಗುತ್ತಿದೆ. ಇದರಿಂದ ಅಭಿವ್ಯಕ್ತಿಯ ಹತ್ತಾರು ಸಾಧ್ಯತೆಗಳು ರೂಪುಗೊಳ್ಳುತ್ತಿವೆ. ಸಾಮಾಜೀಕರಣದ ವಿಸ್ತರಣೆಯೇ ಸಾಹಿತ್ಯಕೃತಿಗಳ, ಕಲಾಕೃತಿಗಳ ಸೃಷ್ಟಿಯಾಗಿದೆ. ಅಂದರೆ ಸಾಹಿತ್ಯಕೃತಿ ರಚನೆಯೆಂದರೆ ಅಕ್ಷರ ಕಲಿಕೆಯೊಡನೆ ಸಮಾಜದ ಮುಖ್ಯಧಾರೆಗೆ ಪ್ರವೇಶಿಸುವ ಒಂದು ಮುಖ್ಯ ಮಾರ್ಗವಾಗಿದೆ. ಇದು ಸರಿಯೋ ತಪ್ಪೋ ಎಂಬುದು ಇಲ್ಲಿ ಮುಖ್ಯವಲ್ಲ. ಮಾತು ಸಂವಹನದ, ಸಂಪರ್ಕದ ಮಾಧ್ಯಮವಾಗಿದ್ದ ಸ್ಥಿತಿ ಬದಲಾಗಿ ಮಾತಿಲ್ಲದ ಭಾಷಿಕ ಆಕೃತಿಗಳ ರಚನೆ ಸಂಪರ್ಕದ, ಸಂವಹನದ ಆಕರಗಳಾಗುತ್ತಿವೆ.

ಇದು ನಮ್ಮ ಕಾಲದ ಇನ್ನೊಂದು ಮುಖ್ಯ ಇಕ್ಕಟ್ಟನ್ನು ಪ್ರತಿನಿಧಿಸುತ್ತಿದೆ. ಮಾತು ಮತ್ತು ಬರೆಹಗಳ ನಡುವಣ ವೈರುಧ್ಯವೀಗ ಗಾಢವಾಗುತ್ತಿದೆ. ಮಾತು ಅನಧಿಕೃತವಾಗಿ ಬರೆಹ ಅಧಿಕೃತವಾಗುತ್ತಿದೆ. ಸಮಾಜದ ಈ ನಂಬಿಕೆ ಮುಖ್ಯವಾಗಿ ಕಾನೂನಿಗೆ ಸಂಬಂಧಿಸಿದ್ದಾಗಿದ್ದರೂ ಸಾಹಿತ್ಯ ಕೃತಿಗಳಿಗೂ ಈ ಮಾತು ಅನ್ವಯವಾಗುತ್ತಿದೆ. ಬರೆಹಗಳ ಮೇಲೆ ಬರೆಹಗಾರನಿಗೆ ಇರುವ ಹಕ್ಕನ್ನು ಸಾಧಿಸುವ ನಮ್ಮ ಆಧುನಿಕ ಚಿಂತನೆಗಳು ಬರೆಹಕ್ಕೂ ಅದನ್ನು ಸೃಷ್ಟಿಸಿದವನಿಗೂ ಬಿಡಿಸಲಾಗದ ನಂಟನ್ನು ಕಟ್ಟಿಕೊಟ್ಟಿವೆ. ಅಂದರೆ ಮಾತು ನಿಲ್ಲುವುದಿಲ್ಲ. ಆದರೆ ಬರೆಹ ನಿಲ್ಲುತ್ತದೆ ಮಾತ್ರವಲ್ಲ; ಬರೆದವನ ಅಧಿಕೃತ ದಾಖಲೆಯಾಗುತ್ತದೆ. ಈ ಪರಿಸ್ಥಿತಿಯಿಂದಾಗಿ ಬರೆಹಗಳನ್ನು

ಓದಲಾಗದ, ಅರಿಯಲಾಗದ ಸಮಾಜವನ್ನು ಊನಗೊಂಡ ಭಾಗವೆಂದು ತಿಳಿಯುತ್ತಿದ್ದೇವೆ. ಆ ಊನ ಸ್ಥಿತಿಯಿಂದ ಹೊರಬರಲು ಪ್ರೇರೇಪಿಸುತ್ತಿದ್ದೇವೆ. ಸಾಹಿತ್ಯ ಕೃತಿಗಳು ಭಾಷಿಕ ಸಮುದಾಯದ ಎಲ್ಲರನ್ನೂ ತಮ್ಮ ಸಂವಹನದ ಜಾಲದಲ್ಲಿ ಸಿಲುಕಿಸಲಾರವು. ಮಾತು ಯಾವ ಸಾಮರ್ಥ್ಯವನ್ನು ಪಡೆದಿತ್ತೋ ಆ ಸಾಮರ್ಥ್ಯ ಬರಹಕ್ಕೆ ಇಲ್ಲ. ಆದರೂ ಬರೆಹಕ್ಕೆ ವಿಶೇಷವಾದ ಸ್ಥಾನ.ಮನ್ನಣೆ.

ಕಾಲದೇಶಗಳ ಆಯಾಮವುಳ್ಳ ಕೃತಿಗಳಿಗೆ. ಅಂದರೆ ಲಿಖಿತ ಆಕಾರವುಳ್ಳ ಕೃತಿಗಳಿಗೆ ಸಿಕ್ಕ ಮನ್ನಣೆ ನಮ್ಮನ್ನು ಇನ್ನೊಂದು ವಿಶಿಷ್ಟ ಸ್ಥಿತಿಗೆ ಗುರಿಮಾಡಿವೆ. ಕೃತಿ ಒಂದು ಆಕಾರವನ್ನು ಪಡೆದಿರುತ್ತದೆ. ಆಕಾರದಲ್ಲಿ ಒಂದು ಅರ್ಥ ಅಡಗಿರುತ್ತದೆಂದು ನಾವು ತಿಳಿದಿದ್ದೇವೆ. ಅಂದರೆ ಆಕಾರವುಳ್ಳ ಎಲ್ಲವೂ ನಮಗೆ ಸಂಕೇತಗಳಾಗಿ ತೋರುತ್ತಿವೆ. ಸಂಕೇತದ ಆಕಾರ ಮತ್ತು ಸಂಕೇತದ ಅರ್ಥ ಇವೆರಡೂ ಬೆಸೆದುಕೊಳ್ಳುವ ಬಗೆ ನಮಗೆ ಮುಖ್ಯವಾಗಿಲ್ಲ. ಅದರ ಬದಲು ಕೃತಿಯ ಆಕಾರವು ಅಡಗಿಸಿಟ್ಟುಕೊಂಡಿರುವ ಅರ್ಥವನ್ನು ಹುಡುಕುತ್ತಿದ್ದೇವೆ. ಮೌಖಿಕ ಸಂಪ್ರದಾಯದ ಅತ್ಯುನ್ನತ ಸೃಷ್ಟಿಗಳೂ ಕಾಲದೇಶಗಳ ಆಯಾಮವುಳ್ಳ ಆಕೃತಿಗಳಾಗಿ ದಾಖಲಾದ ಕೂಡಲೇ ಅವುಗಳ ಅರ್ಥವನ್ನು ತಿಳಿಯುವ ಪ್ರಯತ್ನ ಮೊದಲಾಗುತ್ತದೆ. ಈ ಅರ್ಥಾನ್ವೇಷಣೆಯ ಭರದಲ್ಲಿ ನಾವು ಮರೆತಿರವುದೇನೆಂದರೆ ಒಂದು ಸಂಸ್ಕೃತಿ, ಆಕೃತಿಯ ಆಕರವನ್ನು ಸ್ವಯಂಪೂರ್ಣವೆಂದು ತಿಳಿದಿರುವುದು ಸಾಧ್ಯವೆಂಬ ಸತ್ಯವನ್ನು. ಅಂದರೆ ನಮ್ಮ ನೂರಾರು ಆಚರಣೆಗಳು ಯಾವುದೋ ಸಾಂಸ್ಕೃತಿಕ ಅಂಶವನ್ನು ಪ್ರತಿನಿಧಿಸುತ್ತವೆ ಇಲ್ಲವೇ ಸಂಕೇತಿಸುತ್ತವೆ ಎಂದು ಎಷ್ಟು ಗಾಢವಾಗಿ ನಂಬ ತೊಡಗಿದ್ದೇವೆಂದರೆ ಆ ಆಚರಣೆಗಳು ಸಂಸ್ಕೃತಿಯ ಜೀವನ ಕ್ರಮದಲ್ಲಿ ತಂತಾನೇ ಪೂರ್ಣ ಘಟನೆಗಳಾಗಿರಬಹುದೆಂದು ತಿಳಿಯಲು ನಾವೀಗ ಸಿದ್ಧರಿಲ್ಲ. ಆಚರಣೆಗಳು ಸ್ವಯಂಪೂರ್ಣವಾಗಿರಬಹುದೆಂಬ ಸಾಧ್ಯತೆಯನ್ನು ಈ ಶತಮಾನದಲ್ಲಿ ತೋರಿಸಿಕೊಟ್ಟವರು ಗಾಂಧೀಜಿ. ಅವರ ಹತ್ತಾರು ಕಾರ್ಯಕ್ರಮಗಳು ಬೇರೇನೋ ಉದ್ದೇಶವನ್ನು ಪ್ರತಿನಿಧಿಸುವ ಬದಲು ಅಥವಾ ಪ್ರತಿನಿಧಿಸುವ ಜತೆಗೆ ತಮಗೆ ತಾವೇ ಮಹತ್ವವನ್ನು ಪಡೆದಿರುತ್ತಿದ್ದವು. ನೂಲುವಿಕೆಯನ್ನು ಕುರಿತ ಅವರ ಕಾರ್ಯಕ್ರಮ ಇದಕ್ಕೊಂದು ನಿದರ್ಶನ. ನೂಲುವುದು ನಾಡಿನ ಬಟ್ಟೆಯ ಸಮಸ್ಯೆಯನ್ನು ಪರಿಹರಿಸುವುದೆಂದು ಗಾಂಧೀಜಿ ನಂಬಿದ್ದರು ಎನ್ನಲಾಗದು. ಆದರೆ ಅವರಿಗೆ ನೂಲುವಿಕೆ ವ್ಯಕ್ತಿಯ ತೊಡಗುವಿಕೆ ಮಾತ್ರವಾಗಿತ್ತು. ಆದರೆ ನಮ್ಮ ಪರಿಸ್ಥಿತಿ ಬೇರೆ.ಕುವೆಂಪು ಬೇರೆಲ್ಲೋ ಹೇಳಿದ ಮಾತನ್ನು ಈ ಸಂದರ್ಭಕ್ಕೆ ಹೊಂದಿಸಿಕೊಳ್ಳುವುದಾದರೆ ಅರಿವಾಸೆಯನ್ನು ತೊಟ್ಟ ನಮಗೆ ಇರುವಿಕೆಯ ಗಹನತೆ ಕೈಗೆಟುಕದಂತಾಗಿದೆ

ಈ ಮೇಲೆ ಹೇಳಿದ ಪರಿಸ್ಥಿತಿ ಸಾಹಿತ್ಯಕೃತಿಗಳ ಸೃಷ್ಟಿ ಮತ್ತು ಅನುಸಂಧಾನಗಳೆರಡನ್ನೂ ಗಾಢವಾಗಿ ಪ್ರಭಾವಿಸಿವೆ. ಕೃತಿಯನ್ನು ಅರ್ಥಗ್ರಂಥಿಯೆಂದು ತಿಳಿಯುವ ನಾವು ಆ ಅರ್ಥವನ್ನು ಭಾಷಿಕವಾಗಿ ನಿರೂಪಿಸಲು ಸನ್ನದ್ಧರಾಗಿದ್ದೇವೆ. ಕೃತಿಯ ಅನುಸಂಧಾನ, ಅರ್ಥದ ಸಮಕ್ಷಮವಿಲ್ಲದೆಯೂ ಸಾಧ್ಯವೆಂಬುದನ್ನು ಒಪ್ಪುತ್ತಿಲ್ಲ. ಆ ಸಾಧ್ಯತೆಯನ್ನು ಗೌಣವೆಂದು, ವ್ಯಾಖ್ಯಾನಾತೀತವೆಂದು, ವೈಯಕ್ತಿಕವೆಂದು ವಾದಿಸುತ್ತಿದ್ದೇವೆ. ಸಾಹಿತ್ಯಕೃತಿಯ ಅನುಸಂಧಾನದ ಮಾದರಿಯನ್ನು ರೂಪಿಸಿದ ಧ್ವನಿಸಿದ್ಧಾಂತಿಗಳು ಅರ್ಥದ ಹಂಗಿಲ್ಲದ ಅಸಂಲಕ್ಷ್ಯಕ್ರಮಧ್ವನಿಯನ್ನು ಕಾವ್ಯಾನುಭವದ ಆತ್ಯಂತಿಕ ಸ್ಥಿತಿಯೆಂದರು. ಅರ್ಥದ ಹಂಗನ್ನು ಉಳಿಸಿಕೊಂಡ ಸಂಲಕ್ಷ್ಯಕ್ರಮ ಧ್ವನಿಯನ್ನು ಗೌಣ, ಗುಣೀಭೂತ ವ್ಯಂಗ್ಯವೆಂದರು. ನಾವು ಈ ಮಾದರಿಯನ್ನು ಸಂಪೂರ್ಣವಾಗಿ ತಲೆಕೆಳಗು ಮಾಡಿದ್ದೇವೆ.

ಕಳೆದ ಒಂದೂವರೆ ದಶಕಗಳಿಂದ ಕನ್ನಡ ಸಾಹಿತ್ಯ ವಲಯದಲ್ಲಿ ಬಹುವಾಗಿ ಚರ್ಚಿತವಾಗುತ್ತಿರುವ ಸಾಮಾಜಿಕ ಪ್ರಜ್ಞೆಯ ಮಾತನ್ನು ನೋಡೋಣ. ಸಾಮಾಜಿಕ ಪ್ರಜ್ಞೆಯನ್ನು ಸಾಹಿತ್ಯಕೃತಿಗಳ ಕೇಂದ್ರ ಆಸಕ್ತಿಯೆಂದು ಚಿಂತಿಸುವ ಬಂಡಾಯ ಚಳುವಳಿ ಈಗ ತನ್ನ ಸಾಧನೆಗಳನ್ನು ತಾನೇ ಮೌಲ್ಯಮಾಪನ ಮಾಡಿಕೊಳ್ಳುತ್ತಿದೆ. ತಾನು ಆಶ್ರಯಿಸಿದ ಚಿಂತನೆಯನ್ನು ನಿಜಗೊಳಿಸಲು ಎರಡು ವಿಭಿನ್ನ ಮಾರ್ಗಗಳನ್ನು ಬಂಡಾಯ ಚಳುವಳಿ ಆಶ್ರಯಿಸಿದೆ.

ಒಂದು: ಸಾಹಿತ್ಯಕೃತಿಗಳ ವಿಶ್ಲೇಷಣೆಯಲ್ಲಿ ಸಾಮಾಜಿಕ ಪ್ರಜ್ಞೆಯ ಆವಿಷ್ಕಾರವನ್ನು ಪರಿಶೀಲಿಸುವುದು. ಕಾಲದೇಶಗಳ ಬದ್ಧತೆಯಿಲ್ಲದೆ ಯಾವುದೇ ಕೃತಿಯನ್ನಾದರೂ ಈ ನೆಲೆಯಲ್ಲಿ ವಿವರಿಸುವ ಯತ್ನ ನಡೆದಿದೆ. ಇದರ ಪರಿಣಾಮವಾಗಿ ಕೆಲವೊಮ್ಮೆ ಕೃತಿಗಳನ್ನು ಸಾಮಾಜಿಕ ಪ್ರಜ್ಞೆಯ ಗೈರುಹಾಜರಿನ ಆರೋಪಕ್ಕೆ ಗುರಿಪಡಿಸಿ ಅವನ್ನು ನಿರಾಕರಿಸಲಾಗುತ್ತಿದೆ. ಮತ್ತೆ ಕೆಲವೊಮ್ಮೆ ಕೃತಿಗಳಲ್ಲಿ ಸಾಮಾಜಿಕಪ್ರಜ್ಞೆ ಆವಿಷ್ಕಾರ ಗೊಳ್ಳುವ ಹತ್ತಾರು ವಿಧಾನಗಳನ್ನು ಕುರಿತು ತಿಳುವಳಿಕೆಯನ್ನು ಪಡೆಯುವಂತಾಗಿದೆ. ಮೊದಲ ಪರಿಣಾಮ ದಾರಿ ತಪ್ಪಿಸುವಂಥದ್ದು. ಆದರೆ ಎರಡನೆಯ ಪರಿಣಾಮ ಸಾಹಿತ್ಯ ಕೃತಿಯೊಡನೆ ನಡೆಸುವ ಅನುಸಂಧಾನಕ್ಕೆ ಹೊಸದಾರಿಗಳನ್ನು ತೆರೆದಿದೆ.

ಎರಡು: ಸಾಹಿತ್ಯಕೃತಿಗಳ ಸೃಷ್ಟಿಗೆ ಕೆಲವು ನಿರ್ದೇಶಕಗಳನ್ನು ರೂಪಿಸಿದುದು. ಕೃತಿರಚನೆಗೆ ಮೊದಲೇ ಕೃತಿಕಾರನನ್ನು ವೈಚಾರಿಕ ನೆಲೆಯಲ್ಲಿ ನಿಗದಿಗೊಳಿಸಿದ ಚೌಕಟ್ಟಿಗೆ ಬದ್ಧಗೊಳಿಸುವ ಹಾಗೂ ಅದಕ್ಕೆ ತಕ್ಕ ತರಬೇತನ್ನು ಒದಗಿಸುವ ಯತ್ನಗಳು ಕಾಣಿಸುತ್ತಿವೆ. ಅಥವಾ ಕೃತಿರಚನೆಯ ಕಾರ್ಯಯೋಜನೆಯ ನಿರ್ದೇಶಕ ಸೂತ್ರಗಳನ್ನು ಸಿದ್ಧಪಡಿಸಲಾಗಿದೆಯೆನ್ನಬಹುದು. ಸಮಸ್ಯೆ ಹುಟ್ಟುವುದು ಇಲ್ಲಿಯೇ. ಅನುಭವಗಳನ್ನು

ಭಾಷಿಕ ಆಕಾರಕ್ಕೆ ತರುವಾಗಲೇ ನಿರ್ದಿಷ್ಟ ವೈಚಾರಿಕ ಚೌಕಟ್ಟು ಪರಿಪ್ರೇಕ್ಷ್ಯವಾಗುವುದರಿಂದ ಸಹಜವಾಗಿಯೇ ಕೃತಿಯ ಅನುಸಂಧಾನದಲ್ಲಿ ಈ ಪರಿಪ್ರೇಕ್ಷ್ಯವನ್ನು ಕೃತಿ ಎಷ್ಟರಮಟ್ಟಿಗೆ ಪ್ರತಿನಿಧಿಸುತ್ತದೆ ಎನ್ನುವ ನೆಲೆಯೇ ಮುಖ್ಯವಾಗುತ್ತದೆ. ಅಂತಸ್ಥವಾಗಿರುವ ಅನುಭವ ಸಾಮಗ್ರಿಯಾಗಲೀ ಆ ಅನುಭವ ಪಡೆಯುತ್ತಿರುವ ಆಕಾರವಾಗಲೀ ಗೌಣವಾಗಿಬಿಡುತ್ತವೆ. ಅಂದರೆ ಕೃತಿಕಾರನಿಗೆ ಕೃತಿ ರಚನೆ ಎನ್ನುವುದು ಸಾಮಾಜಿಕ ಸಮ್ಮತಿಯನ್ನು ಪಡೆಯುವ ಹುನ್ನಾರವಾಗುತ್ತದೆಯೇ ಹೊರತು ಮತ್ತೇನೂ ಅಲ್ಲ.

ನಾವೀಗ ಎಲ್ಲ ಬಗೆಯ ಪಾವಿತ್ರ್ಯವನ್ನು ಭಗ್ನಗೊಳಿಸಿದ್ದೇವೆ. ಪವಿತ್ರವಾದುದೆಲ್ಲ ಸಂದೇಹಕ್ಕೆ ಯೋಗ್ಯವಾದುದೆಂಬ ನಂಬಿಕೆ ಬಲವಾಗಿದೆ. ಪಾವಿತ್ರ್ಯದ ಕಲ್ಪನೆಯನ್ನು ಒಂದು ಸಮುದಾಯ ಇಲ್ಲವೆ ಒಂದು ಸಮಾಜ ಏಕೆ ರೂಪಿಸಿಕೊಳ್ಳುತ್ತದೆ ಎನ್ನುವ ಬೀಜ ಪ್ರಶ್ನೆಯನ್ನು ಕೇಳಿಕೊಳ್ಳುವ ಕಾಲವೀಗ ಬಂದಿದೆ. ಪವಿತ್ರತೆಯ ಮೂಲ ಮತ್ತು ಅನುಭವಗಳು ಮಾನವರನ್ನು ಅಧೀನತೆಯ ನೆಲೆಗೆ ತಳ್ಳುತ್ತವೆನ್ನುವುದು ವಿಚಾರವಾದಿಗಳ ವಾದ. ಸರಿ. ಆದರೆ ವಿಚಾರವಾದವೇ.ಕೊನೆಯ ಪಕ್ಷ ನಾವು ಈಗ ತಿಳಿದಿರುವ ವಿಚಾರವಾದವೇ. ನಮ್ಮ ನಾಳಿನ ಸಮಾಜಕ್ಕೆ ತಕ್ಕ ಬುನಾದಿಯನ್ನು ಹಾಕಿಕೊಡಬಲ್ಲದೆಂದು ನಂಬಲು ಯಾವ ಕಾರಣಗಳಿವೆ? ವಿಜ್ಞಾನ ಮತ್ತು ತಾಂತ್ರಿಕತೆಗಳ ಬಗೆಗಿನ ನಮ್ಮ ಮೋಹದಿಂದ ವಿಭಿನ್ನ ಸಾಧ್ಯತೆಗಳ ದಾರಿಗಳನ್ನು ಮುಚ್ಚಿಕೊಂಡು ಬಿಟ್ಟಿದ್ದೇವೆ. ಆ ದಾರಿಗಳ ಬಾಗಿಲುಗಳನ್ನು ಮುಟ್ಟಿದರೆ ಕಲ್ಲಾಗಿ ಹೋಗುತ್ತೇವೆಂಬ ಭಾವ ನಮ್ಮನ್ನು ಆವರಿಸಿದೆ. ಇನ್ನು ಆ ಬಾಗಿಲು ತೆರೆದು ಒಳಹೊಗುವ ಮಾತಂತೂ ದೂರ ಉಳಿಯಿತು. ಇದೇನೇ ಇರಲಿ ಹೊಸ ಪಾವಿತ್ರ್ಯವನ್ನು ನಾವು ಮತ್ತೆ ರೂಪಿಸಿಕೊಳ್ಳದಿದ್ದರೆ ನಮ್ಮ ಸಾಮಾಜಿಕ ಅಸ್ತಿತ್ವಕ್ಕೆ ಭಾರಿ ಆಘಾತಗಳು ಕಾಯ್ದಿವೆ.

ಈ ಪಾವಿತ್ರ್ಯ ಸೃಷ್ಟಿ ಸಾಹಿತ್ಯಕ್ಕೂ ಅವಶ್ಯ. ಆಧುನಿಕತೆ ಬಲಗೊಳಿಸುತ್ತಿರುವ ವ್ಯಕ್ತಿವಾದ, ವ್ಯಕ್ತಿಸ್ವಯಂಪೂರ್ಣವಾದಗಳ ಪರಿಣಾಮವೆಂದರೆ ಸಾಹಿತ್ಯಕೃತಿಗಳಿಗೆ ತೆರೆದುಕೊಳ್ಳುವ ಮನಸ್ಸು ಸಂಪೂರ್ಣವಾಗಿ ನಾಶವಾಗಿ ಹೋಗುವುದು. ಮತ್ತೊಂದು ಜಗತ್ತಿನೊಡನೆ ನನಗೇಕೆ ಸಂವಾದ ಬೇಕು?. ಅದು ಅನಪೇಕ್ಷಣೀಯ ಮಾತ್ರವಲ್ಲ, ಭಯಾನಕವೂ ಆಗಿ ತೋರುತ್ತದೆ. ಪವಿತ್ರವಾದದ್ದರಲ್ಲಿ ನಂಬಿಕೆ ಇದ್ದಾಗ ಮಾತ್ರ ತೆರೆದುಕೊಳ್ಳುತ್ತೇವೆ. ಒಳಗೊಳ್ಳುವಿಕೆಯಲ್ಲಿ ನಮಗಾಗ ಅರ್ಥಕಾಣತೊಡಗುತ್ತದೆ.

ಕನ್ನಡ ಸಾಹಿತ್ಯದ ಇನ್ನೊಂದು ಇಕ್ಕಟ್ಟು ಭಾಷೆಗೆ ಸಂಬಂಧಿಸಿದ್ದಾಗಿದೆ. ಶತಮಾನದ ಆರಂಭದಲ್ಲಿ ಇಂಗ್ಲಿಶ್ ಭಾಷೆ ಮತ್ತು ಸಾಹಿತ್ಯ ಬೀರಿದ ಪರಿಣಾಮಗಳ ಬಗೆಗೆ ಮೊದಲಲ್ಲಿ ಕೆಲವು ಅಂಶಗಳನ್ನು ಗಮನಿಸಿದ್ದೇವೆ ಶತಮಾನದ ಕೊನೆಗೆ ನಿಂತಿರುವಾಗ

ಮತ್ತೆ ಇನ್ನೊಂದು ಅಂಥದೇ ಜಾಲದ ಪರಿಣಾಮಗಳಿಗೆ ಒಳಗಾಗುತ್ತಲೇ ನಮ್ಮ ಸ್ವಂತಿಕೆಯನ್ನು ಕಾಯ್ದುಕೊಳ್ಳುವ ಸಮಸ್ಯೆಯನ್ನು ಎದುರಿಸುತ್ತಿದ್ದೇವೆ. ಜಾಗತೀಕರಣ, ಉದಾರೀಕರಣ, ಮುಕ್ತ ಮಾರುಕಟ್ಟೆ ಮುಂತಾದ ಸಂಗತಿಗಳು ಈಗ ಕೇವಲ ಅರ್ಥಶಾಸ್ತ್ರದ ಪರಿಭಾಷೆಯಾಗಿ ಉಳಿದಿಲ್ಲ. ಇವುಗಳ ವ್ಯಾಪ್ತಿ ಸಂಸ್ಕೃತಿಯ ಹಲವು ವಲಯಗಳನ್ನು ಒಳಗೊಳ್ಳುತ್ತಿದೆ. ಸಾಹಿತ್ಯವೂ ಸಹಜವಾಗಿಯೇ ಇದರಿಂದ ಪ್ರಭಾವಿತವಾಗದೇ ಮಾರ್ಗವಿಲ್ಲ. ಅಥವಾ ಇಂಥ ಪ್ರಭಾವಗಳಿಗೆ ಒಳಗಾಗಿಯೂ ಅನನ್ಯವಾಗುವ ಹೊಂಚುಹುನ್ನಾರಗಳನ್ನು ಹುಡುಕುವ ಜವಾಬುದಾರಿ ನಮ್ಮ ಸಾಹಿತ್ಯ ಎದುರಿಸುತ್ತಿದೆ. ರೂಪಾಯಿಯ ಸಾಮರ್ಥ್ಯವನ್ನು ಡಾಲರಿನೊಡನೆ ಗುರುತಿಸುವ ಮಾದರಿಯಲ್ಲಿ ಕನ್ನಡದಂಥ ಭಾಷೆಗಳು ಇಂಗ್ಲಿಶಿನೊಡನೆ ತಮ್ಮ ಸಾಮರ್ಥ್ಯವನ್ನು ಗುರುತಿಸಿಕೊಳ್ಳಬೇಕಾಗಿ ಬಂದಿದೆ. ಕನ್ನಡ ಅನುವಾದದ ಭಾಷೆಯಾಗಿ ಬಿಡುತ್ತಿದೆ. ಈಗ ಕನ್ನಡದಲ್ಲಿ ಹೊಸದನ್ನು ಬರೆಯುವುದೆಂದರೆ ಇಂಗ್ಲಿಶಿನ ಮೂಲಕ ಅನುವಾದಿಸಿಕೊಳ್ಳುವುದು. ಅಥವಾ ಇಂಗ್ಲಿಶಿನ ಮೂಲಕ ಗ್ರಹಿಸಿ ಅದನ್ನು ಕನ್ನಡದಲ್ಲಿ ಬರೆಯುವುದು. ಇಂಗ್ಲಿಶ್ ಜ್ಞಾನದ ಬೆಳಕಿಂಡಿ ಮುಂತಾದ ಹೇಳಿಕೆಗಳು ಈಗ ಕೇವಲ ಅಲಂಕಾರದ ಮಾತುಗಳಾಗಿಲ್ಲ. ಲೋಕಪರಿಪ್ರೇಕ್ಷ್ಯವನ್ನು ನಮಗಾಗಿ,ನಮ್ಮ ಭಾಷೆಗಾಗಿ ಈಗ ಇಂಗ್ಲಿಶ್ ನಿರ್ಧರಿಸುತ್ತಿದೆ.

ಈ ಪರಿಸ್ಥಿತಿಯ ಇನ್ನೊಂದು ಮುಖ ಹೀಗಿದೆ. ಕನ್ನಡ ಸೃಜನ ಸಾಹಿತ್ಯ ಕೂಡ ಅಧಿಕೃತಗೊಳ್ಳಲು ಇಂಗ್ಲಿಶಿಗೆ ಅನುವಾದವಾಗುವುದು ಅನಿವಾರ್ಯವಾಗುತ್ತಿದೆ. ಕನ್ನಡ ಭಾಷೆಯ ಸಾಹಿತ್ಯಕೃತಿ ಕನ್ನಡ ಓದುಗರಿಗೆ ಮಾತ್ರ ಸೀಮಿತಗೊಂಡರೆ ಅದರ ಮಹತ್ವ ದೃಢಪಡುವುದಿಲ್ಲವೆಂಬ, ಹಾಗೆಯೇ ಅದರ ಮಹತ್ವ ಯಶಸ್ವಿಯಾಗಿ ದೃಢಪಡಬೇಕಾದರೆ ಆ ಕೃತಿ ಇಂಗ್ಲಿಶಿಗೆ ಅನುವಾದಗೊಳ್ಳಬೇಕೆಂಬ ಸನ್ನಿವೇಶವನ್ನು ಕಾಣುತ್ತಿದ್ದೇವೆ. ಅಂದರೆ ಕನ್ನಡ ಅಧಿಕೃತಗೊಳ್ಳಲು ಈಗ ಇಂಗ್ಲಿಶಿನ ನೆರವು ಹೀಗೆ ಇನ್ನೊಂದು ರೀತಿಯಲ್ಲಿ ಅನಿವಾರ್ಯವೆಂಬಂಥ ಪರಿಸ್ಥಿತಿ ನಿರ್ಮಾಣವಾಗಿದೆ. ಈ ಪ್ರಮಾಣೀಕರಣ ಪ್ರಕ್ರಿಯೆ ಪರೋಕ್ಷವಾಗಿ ಸಾಹಿತ್ಯಕೃತಿಗಳ ಸೃಷ್ಟಿಯನ್ನೂ ಪ್ರಭಾವಿಸಬಹುದು. ಅಂದರೆ ಇಂಗ್ಲಿಶ್ ಭಾಷೆಯಲ್ಲಿ ಅನುವಾದಗೊಳ್ಳಲು, ಮಂಡಿತವಾಗಲು ಸುಲಭವಾಗಿ ಅನುವು ಮಾಡಿಕೊಡುವ ಕೃತಿಜಗತ್ತನ್ನು ರೂಪಿಸುವ ಕಡೆಗೆ ನಮ್ಮ ಬರೆಹಗಾರರ ಒಲುವೆಯುಂಟಾಗಲು ಸಾಧ್ಯ. ಇದು ಕೇವಲ ಊಹೆಯ ಮಾತು ಮಾತ್ರವಲ್ಲ. ನಿದರ್ಶನಗಳನ್ನೂ ಕಾಣಬಹುದಾಗಿದೆ. ಅನಂತಮೂರ್ತಿಯವರ ಈಚಿನ ಕಾದಂಬರಿ 'ಭವ'ವನ್ನು ಮೇಲಿನ ಮಾತಿನ ಹಿನ್ನೆಲೆಯಲ್ಲಿ ಮತ್ತೊಮ್ಮೆ ಗಮನಿಸಲು ಕೋರುತ್ತೇನೆ. ಹಾಗಿದ್ದರೆ ನಮಗೆ ಈ ಅನುವಾದದ

ಸ್ಥಿತಿಯಿಂದ.ಆನುಷಂಗಿಕ ನೆಲೆಗಳಿಂದ ಬಿಡುಗಡೆಯೇ ಇಲ್ಲವೇ? ಹತಾಶೆಗೆ ಕಾರಣಗಳಿಲ್ಲ. ಕನ್ನಡ ಸೃಜನ ಪ್ರತಿಭೆ ಈ ಸವಾಲುಗಳನ್ನು ಎದುರಿಸಬಲ್ಲುದು. ಇಂಗ್ಲಿಶಿನ ಜಾಲದಿಂದ ಹೊರಬರಲು ಅವಶ್ಯವಿರುವ ತಂತ್ರಗಳನ್ನು ರೂಪಿಸಿಕೊಳ್ಳಬಲ್ಲುದು. ಆದರೆ ಇಂಥ ಸಮಸ್ಯೆಯೊಂದಿದೆ ಎಂಬ ಅಂಶ ಮೊದಲು ನಮಗೆಲ್ಲರಿಗೂ ಮನದಟ್ಟಾಗಬೇಕಿದೆ.

---

ಇದು ಭಾಷಣವೊಂದರ ಪುನಾರಚನೆ. ಆ ಭಾಷಣದ ಟಿಪ್ಪಣಿಗಳನ್ನು ಒದಗಿಸಿ ಪುನಾರಚನೆಗೆ ನೆರವಾದ ಶ್ರೀ ಕೇಶವನ್ ಪ್ರಸಾದ್. ಕೆ ಅವರಿಗೆ ವಂದನೆಗಳನ್ನು ಸಲ್ಲಿಸುವುದು ನನ್ನ ಕರ್ತವ್ಯವಾಗಿದೆ.

# ಕರ್ನಾಟಕದಲ್ಲಿ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಜನಾಂಗಗಳ ಅಭಿವೃದ್ಧಿ

ಡಾ. ಎಂ. ಮಹದೇವ

ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಜನಾಂಗಗಳಿಗೆ ಸೇರಿದವರ ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿಗಳನ್ನು ಕಾಪಾಡಿ, ಬೆಳೆಸಬೇಕಾದ ಸಂವಿಧಾನದ ಅಗತ್ಯಗಳನ್ನು ಈಡೇರಿಸಲೂ, ಸಾಮಾಜಿಕ ಅನ್ಯಾಯ ಮತ್ತು ಎಲ್ಲ ರೀತಿಯ ಶೋಷಣೆಯ ವಿರುದ್ಧ ಅವರಿಗೆ ರಕ್ಷಣೆ ಒದಗಿಸಲೂ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನೇಕ ಕ್ರಮಗಳನ್ನು ಕೈಗೊಂಡಿವೆ. ಶಿಕ್ಷಣ ಸಂಸ್ಥೆಗಳಲ್ಲಿ, ಸರ್ಕಾರಿ ನೌಕರಿಗಳಲ್ಲಿ ಹಾಗೂ ಶಾಸನಸಭೆಗಳಲ್ಲಿ ಸ್ಥಾನಗಳ ಮೀಸಲಾತಿ ಈ ಕ್ರಮಗಳಲ್ಲಿ ಸೇರಿದೆ. ಅಭಿವೃದ್ಧಿ ಕಾರ್ಯಗಳನ್ನು ಜಾರಿಗೊಳಿಸುವ ಹೊಣೆ ಹೊತ್ತ ಸರ್ಕಾರಿ ಸಂಸ್ಥೆಗಳು ತಮ್ಮ ಅಭಿವೃದ್ಧಿ ನಿಧಿಯಲ್ಲಿ ಒಂದು ಭಾಗವನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗಗಳ ಜನರ ಕ್ಷೇಮಾಭ್ಯುದಯಕ್ಕಾಗಿ ನಿಗದಿ ಮಾಡಬೇಕಾದ್ದು ಹಾಗೂ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳಡಿ ಈ ಜನರಲ್ಲಿ ಫಲಾನುಭವಿಗಳನ್ನು ಗುರುತಿಸುವುದು ಕಡ್ಡಾಯವಾಗಿದೆ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗಗಳ ಜನರ ಅಭಿವೃದ್ಧಿಗಾಗಿ ಏನೆಲ್ಲ ಕ್ರಮಗಳನ್ನು ಕೈಗೊಳ್ಳಲಾಗಿದ್ದರೂ, ಈ ಜನರ ಸ್ಥಾನಮಾನಗಳು ಇನ್ನೂ ಅತೃಪ್ತಿಕರವಾಗಿಯೇ ಇವೆ. ಸಾಮಾಜಿಕವಾಗಿ ಈ ವರ್ಗಗಳು ಇನ್ನೂ ಅತ್ಯಂತ ಕೆಳ ಸ್ಥಿತಿಯಲ್ಲಿಯೇ ಇವೆ. ಇವರಲ್ಲಿ ಹೆಚ್ಚಿನವರು ಕೃಷಿ ಕಾರ್ಮಿಕರು ಹಾಗೂ ದಿನಗೂಲಿ ಗಳಿಸುವವರು. ಇದರ ಪರಿಣಾಮವಾಗಿ ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿ ಕನಿಷ್ಠ ಮಟ್ಟದ ಜೀವನವನ್ನು ನಡೆಸುತ್ತಿರುವ ಈ ಜನರು ಸಮಾಜದ ಇತರ ಗುಂಪುಗಳೊಂದಿಗೆ ಬೆರೆಯುವುದು ದೂರದ ಮಾತಾಗಿದೆ.

**ಸಾಮಾಜಿಕ-ಆರ್ಥಿಕ ಸ್ಥಾನಮಾನ**

ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಜನಾಂಗಗಳ ಜನರ ಸಂಖ್ಯೆಯ ಪ್ರಮಾಣ ೧೯೭೧ ರಲ್ಲಿ ಶೇಕಡ ೧೩.೯೨ ಇದ್ದದ್ದು ೧೯೯೧ ರಲ್ಲಿ ಶೇಕಡ ೨೦.೬೨ ಕ್ಕೆ ಏರಿರುವುದು ಗಮನಾರ್ಹವಾದ ಅಂಶವಾಗಿದೆ. ಮೇಲಿನ ಎರಡೂ

ಜನಗಣತಿಗಳ ಅವಧಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗಗಳ ಜನಸಂಖ್ಯೆಯ ಏರಿಕೆ ರಾಜ್ಯದಲ್ಲಿ ಜನಸಂಖ್ಯೆಯ ಸರಾಸರಿ ಏರಿಕೆಗಿಂತ ಹೆಚ್ಚಾಗಿದೆ.

ರಾಜ್ಯದಲ್ಲಿ ಸಾಕ್ಷರತಾ ಪ್ರಮಾಣ ಶೇಕಡ ೫೬.೦೪ ರಷ್ಟಿದ್ದರೆ ಪರಿಶಿಷ್ಟ ಜಾತಿಗಳ ಜನರಲ್ಲಿ ಸಾಕ್ಷರತಾ ಪ್ರಮಾಣ ಶೇಕಡ ೩೦.೭೧ ಹಾಗೂ ಪರಿಶಿಷ್ಟ ಜನಾಂಗಗಳ ಜನರಲ್ಲಿ ಶೇಕಡ ೨೯.೨ ರಷ್ಟಿರುವುದು ಶೋಚನೀಯವಾದ ಸಂಗತಿ. ರಾಜ್ಯದಲ್ಲಿ ಗಂಡಸರು ಮತ್ತು ಹೆಂಗಸರ ಸಾಕ್ಷರತಾ ಪ್ರಮಾಣ ಕ್ರಮವಾಗಿ ಶೇಕಡ ೬೭.೭೬ ಮತ್ತು ೪೪.೩೪ ಇದ್ದರೆ ಪರಿಶಿಷ್ಟ ಜಾತಿಗಳಲ್ಲಿ ಅದು ಕ್ರಮವಾಗಿ ಶೇಕಡ ೪೦.೧೧ ಮತ್ತು ೨೦.೯೩ ಹಾಗೂ ಪರಿಶಿಷ್ಟ ಜನಾಂಗಗಳಲ್ಲಿ ಶೇಕಡ ೩೮.೯೩ ಮತ್ತು ೧೯.೨೦ ಇದೆ.

ಶಿಕ್ಷಣ ಸಾಮಾಜಿಕ ಅಭಿವೃದ್ಧಿಯ ಒಂದು ಮುಖ್ಯ ಲಕ್ಷಣವಾಗಿದ್ದ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗಗಳ ಜನರಲ್ಲಿ ಶೇಕಡ ೬೦ ರಷ್ಟು ಗಂಡಸರೂ, ಶೇಕಡ ೮೦ ರಷ್ಟು ಹೆಂಗಸರೂ ಅನಕ್ಷರಸ್ಥರಾಗಿರುವುದು ಈ ಜನರು ಶಿಕ್ಷಣದಲ್ಲಿ ಹಿಂದುಳಿದಿರುವುದರ ಸ್ಪಷ್ಟ ದ್ಯೋತಕವಾಗಿದೆ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗಗಳ ಜನರಲ್ಲಿ ಸುಮಾರು ಶೇಕಡ ೪೫ ರಷ್ಟು ಜನರು ಭೂರಹಿತ ಕೃಷಿ ಕಾರ್ಮಿಕರಾಗಿದ್ದಾರೆ ಹಾಗೂ ಶೇಕಡ ೨೪ ರಷ್ಟು ಬೇಸಾಯಗಾರರಾಗಿದ್ದಾರೆ ಹಾಗೂ ಉಳಿದವರು ಗೃಹಕೈಗಾರಿಕೆ ಹಾಗೂ ಗೃಹೇತರ ಕೈಗಾರಿಕೆಗಳು, ಕಟ್ಟಡ ನಿರ್ಮಾಣ ಮತ್ತಿತರ ವೃತ್ತಿಗಳಲ್ಲಿ ತೊಡಗಿದವರಾಗಿದ್ದಾರೆ ಎಂಬುದನ್ನು ಪಟ್ಟಿ ೧ ರಲ್ಲಿ ಕಾಣಬಹುದು.

**ಮೂಲ: ೧೯೯೧ರ ಭಾರತದ ಜನಗಣತಿ**

ಭೂಮಿಯಂತಹ ನೈಸರ್ಗಿಕ ಸಂಪನ್ಮೂಲಗಳ ಲಭ್ಯತೆಯ ದೃಷ್ಟಿಯಿಂದಲೂ ಪರಿಶಿಷ್ಟ ಜಾತಿ, ಪರಿಶಿಷ್ಟ ಜನಾಂಗಗಳ ಜನರು ವಂಚಿತರಾಗಿದ್ದಾರೆ. ರಾಜ್ಯದಲ್ಲಿ ಒಟ್ಟು ಸಾಗುವಳಿಯೋಗ್ಯ ಹಿಡುವಳಿಗಳಲ್ಲಿ ಈ ಜನರ ಪಾಲು ಶೇಕಡ ೧೫ ಮಾತ್ರ ಆಗಿದೆ. ಇವರಲ್ಲಿ ಅತಿ ಸಣ್ಣ, ಸಣ್ಣ ಮತ್ತು ಅರೆ ಮಧ್ಯಮ ವರ್ಗದ ರೈತರ ಸಂಖ್ಯೆಯೇ ಹೆಚ್ಚು. ಶೇಕಡ ೯೩ ರಷ್ಟು ಪರಿಶಿಷ್ಟ ಜಾತಿಗಳಿಗೆ ಸೇರಿದವರು ಹಾಗೂ ಶೇಕಡ ೮೭ ರಷ್ಟು ಪರಿಶಿಷ್ಟ ಜನಾಂಗಗಳಿಗೆ ಸೇರಿದವರು. ಸಾಗುವಳಿಯೋಗ್ಯ ಹಿಡುವಳಿಗಳಲ್ಲಿನ ಅಸಮಾನ ಹಂಚಿಕೆಯನ್ನು ಪಟ್ಟಿ - ೨ ರಲ್ಲಿ ವಿವರವಾಗಿ ನೋಡಬಹುದು.

ಪಟ್ಟಿ ೧: ೧೯೯೧ರ ಜನಗಣತಿಯ ಮೇರೆಗೆ ಕರ್ನಾಟಕದಲ್ಲಿ ಒಟ್ಟು ಜನಸಂಖ್ಯೆ ಹಾಗೂ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಜನಾಂಗಗಳ ಜನರು ತೊಡಗಿರುವ ವೃತ್ತಿಗಳ ವರ್ಗೀಕರಣ

(ಲಕ್ಷ ಸಂಖ್ಯೆಯಲ್ಲಿ)

| ಕ್ರಮ ಸಂಖ್ಯೆ | ವೃತ್ತಿ | ಒಟ್ಟು ಜನಸಂಖ್ಯೆ | ಶೇಕಡಾವಾರು | ಪ.ಜಾತಿ/ ಪ. ಜನಾಂಗ | ಶೇಕಡಾವಾರು |
|---|---|---|---|---|---|
| ೧. | ಬೇಸಾಯಗಾರರು | ೫೯.೧೬ | ೩೧.೩೨ | ೧೦.೨೪ | ೨೪.೩೫ |
| ೨. | ಕೃಷಿಕಾರ್ಮಿಕರು | ೫೦.೦೦ | ೨೬.೪೭ | ೧೮.೭೯ | ೪೪.೬೪ |
| ೩. | ಪಶುಸಂಗೋಪನೆ, ಅರಣ್ಯಗಾರಿಕೆ, ಮೀನುಗಾರಿಕೆ, ಬೇಟೆ, ಕಾಫಿ ಮುಂತಾದ ಬೆಳೆಗಳ ತೋಟಗಾರಿಕೆ ಹಣ್ಣಿನ ತೋಟಗಳು ಮತ್ತು ತತ್ಸಂಬಂಧಿತ ಕಾಯಕಗಳು | ೬.೧೭ | ೩.೨೭ | ೧.೫೪ | ೩.೬೬ |
| ೪. | ಗಣಿಕಾರಿಕೆ ಮತ್ತು ಕಲ್ಲುಗಣಿ ಕೆಲಸ | ೧.೧೬ | ೦.೬೧ | ೦.೫೯ | ೧.೪೦ |
| ೫. | ಗೃಹ ಮತ್ತು ಗೃಹೇತರ ಕೈಗಾರಿಕೆಗಳಲ್ಲಿ ತಯಾರಿಕೆ, ಸಂಸ್ಕರಣ, ಸೇವೆ ಮತ್ತು ರಿಪೇರಿ | ೧೮.೫೧ | ೯.೮೦ | ೨.೪೪ | ೫.೮೦ |
| ೬. | ಕಟ್ಟಡ ನಿರ್ಮಾಣ | ೪.೨೮ | ೨.೨೭ | ೧.೨೭ | ೩.೦೨ |
| ೭ | ವ್ಯಾಪಾರ ಮತ್ತು ವಾಣಿಜ್ಯ | ೧೩.೮೦ | ೭.೩೧ | ೧.೦೫ | ೨.೫೦ |
| ೮. | ಸಾರಿಗೆ, ದಾಸ್ತಾನು ಮತ್ತು ಸಂಪರ್ಕ | ೪.೫೫ | ೨.೪೧ | ೦.೬೩ | ೧.೫೦ |
| ೯. | ಇತರ ಸೇವೆಗಳು | ೧೫.೨೯ | ೮.೧೦ | ೨.೨೮ | ೫.೪೨ |
| ೧೦. | ಅಲ್ಲಲ್ಲಿ ಕೆಲಸ ಮಾಡುವವರು | ೧೫.೯೫ | ೮.೪೪ | ೩.೨೩ | ೭.೬೮ |
| | | **೧೮೮.೮೭** | **೧೦೦.೦೦** | **೪೨.೦೬** | **೧೦೦.೦೦** |
| | **ಒಟ್ಟು** | **(೪೧.೯೯)** | | **(೪೫.೩೦)** | |

ಮೂಲ : ೧೯೯೧ರ ಭಾರತದ ಜನಗಣತಿ

ಪಟ್ಟಿ ೨: ೧೯೯೦-೯೧ರಲ್ಲಿ ಕರ್ನಾಟಕದಲ್ಲಿ ಪರಿಶಿಷ್ಟ ಜಾತಿ, ಜನಾಂಗಗಳ ಜನರು ಮತ್ತು ಇತರರು ಹೊಂದಿರುವ ಸಾಗುವಳಿಯೋಗ್ಯ ಹಿಡುವಳಿಗಳ ಸಂಖ್ಯೆ, ಕ್ಷೇತ್ರ ಮತ್ತು ಹಿಡುವಳಿಯ ಸರಾಸರಿ ಗಾತ್ರ

(ಕ್ಷೇತ್ರ ಹೆಕ್ಟೇರ್‌ಗಳಲ್ಲಿ) (ಕಂಸದಲ್ಲಿ ಕೊಟ್ಟಿರುವುದು ಶೇಕಡ ಸಂಖ್ಯೆ)

| ಗುಂಪು | ಅತಿಸಣ್ಣ | ಸಣ್ಣ | ಅರೆ-ಮಧ್ಯಮ | ಮಧ್ಯಮ | ಭಾರಿ | ಎಲ್ಲ ಅಳತೆಗಳು |
|---|---|---|---|---|---|---|
| **ಸಾಗುವಳಿಯೋಗ್ಯ ಹಿಡುವಳಿಗಳ ಸಂಖ್ಯೆ** | | | | | | |
| ಪರಿಶಿಷ್ಟ ಜಾತಿಗಳು | ೨೯೦ | ೨೦೧ | ೧೦೫ | ೩೭ | ೫ | ೬೩೮ |
| | (೪೫.೫) | (೩೧.೫) | (೧೬.೫) | (೫.೮) | (೦.೭) | (೧೦೦.೦) |
| ಪರಿಶಿಷ್ಟ ಜನಾಂಗಗಳು | ೯೮ | ೮೬ | ೬೨ | ೩೨ | ೫ | ೨೮೩ |
| | (೩೪.೫) | (೩೦.೨) | (೨೨.೧) | (೧೧.೩) | (೧.೯) | (೧೦೦.೦) |
| ಇತರರು | ೧೮೭೪ | ೧೨೯೯ | ೯೯೫ | ೫೬೭ | ೧೨೦ | ೫೮೫೫ |
| | (೩೮.೬) | (೨೬.೮) | (೨೦.೫) | (೧೧.೭) | (೨.೪) | (೧೦೦.೦) |
| **ಸಾಗುವಳಿಯೋಗ್ಯ ಹಿಡುವಳಿಗಳ ಕ್ಷೇತ್ರ** | | | | | | |
| ಪರಿಶಿಷ್ಟ ಜಾತಿಗಳು | ೧೪೭ | ೨೯೧ | ೨೮೦ | ೨೧೧ | ೬೬ | ೯೯೫ |
| | (೧೪.೮) | (೨೯.೨) | (೨೮.೧) | (೨೧.೨) | (೬.೭) | (೧೦೦.೦) |
| ಪರಿಶಿಷ್ಟ ಜನಾಂಗಗಳು | ೫೨ | ೧೨೫ | ೧೭೨ | ೧೮೬ | ೭೯ | ೬೧೪ |
| | (೮.೪) | (೨೦.೩) | (೨೮.೧) | (೩೦.೩) | (೧೨.೯) | (೧೦೦.೦) |
| ಇತರರು | ೮೭೩ | ೧೮೯೨ | ೨೭೪೯ | ೩೩೭೩ | ೧೮೨೫ | ೧೦೭೧೨ |
| | (೮.೨) | (೧೭.೭) | (೨೫.೬) | (೩೧.೫) | (೧೭.೦) | (೧೦೦.೦) |
| **ಹಿಡುವಳಿಗಳ ಸರಾಸರಿ ಗಾತ್ರ** | | | | | | |
| ಪರಿಶಿಷ್ಟ ಜಾತಿಗಳು | ೦.೫೧ | ೧.೪೫ | ೨.೬೬ | ೫.೭೨ | ೧೪.೧೧ | ೧.೫೬ |
| ಪರಿಶಿಷ್ಟ ಜನಾಂಗಗಳು | ೦.೫೩ | ೧.೪೬ | ೨.೭೫ | ೫.೮೨ | ೧೪.೬೫ | ೨.೧೭ |
| ಇತರರು | ೦.೪೭ | ೧.೪೬ | ೨.೭೬ | ೫.೯೫ | ೧೫.೨೯ | ೨.೨೧ |

ಮೂಲ: ಕರ್ನಾಟಕ ಸರ್ಕಾರದ ೧೯೯೦-೯೧ರ ಅರ್ಥಶಾಸ್ತ್ರ ಮತ್ತು ಅಂಕಿಅಂಶಗಳ ನಿರ್ದೇಶನಾಲಯದ, ಕೃಷಿ ಹಿಡುವಳಿಗಳ ಗಣತಿ ಕುರಿತು ವರದಿ.

ರಾಜ್ಯದಲ್ಲಿ ಪರಿಶಿಷ್ಟ ಜಾತಿ, ಜನಾಂಗದವರ ಜನಸಂಖ್ಯೆ ಒಟ್ಟು ಜನಸಂಖ್ಯೆಯ ಶೇಕಡ ೨೦ ಕ್ಕಿಂತ ಹೆಚ್ಚಾಗಿದ್ದರೂ ಅವರಿಗೆ ದೊರೆತಿರುವ ಸಾಗುವಳಿಯೋಗ್ಯ ಭೂಮಿಯ ಪಾಲು ಶೇಕಡ ೧೫ ರಷ್ಟು ಮಾತ್ರ. ಇದರ ಪರಿಣಾಮವಾಗಿ ಇತರರ ಹಿಡುವಳಿಗಳ ಸರಾಸರಿ ಗಾತ್ರ ೨.೨೧ ಹೆಕ್ಟೇರ್‌ಗಳಾಗಿದ್ದರೆ ಈ ಜನ ಹಿಡುವಳಿಗಳ ಸರಾಸರಿ ಗಾತ್ರ ಕ್ರಮವಾಗಿ ೧.೫೬ ಮತ್ತು ೨.೧೭ ಹೆಕ್ಟೇರ್ ಎಂಬ ಅಂಶ ಪಟ್ಟಿ ೨ ರಿಂದ ಸ್ಪಷ್ಟವಾಗುತ್ತದೆ.

ವಸತಿ, ವಿದ್ಯುತ್, ಸುರಕ್ಷಿತ ಕುಡಿಯುವ ನೀರು, ಶೌಚಾಲಯ ಮುಂತಾದ ಮೂಲಭೂತ ಸೌಲಭ್ಯಗಳನ್ನು ಕರ್ನಾಟಕದ ಜನರು ಅದರಲ್ಲೂ ವಿಶೇಷವಾಗಿ ಪರಿಶಿಷ್ಟ ಜಾತಿ, ಜನಾಂಗಗಳಿಗೆ ಸೇರಿದ ಜನರು ಹೊಂದಿಲ್ಲದಿರುವುದು ಹೆಚ್ಚು ಕಳವಳದ ವಿಷಯವಾಗಿದೆ. ವಸತಿ ಮತ್ತಿತರ ಸೌಲಭ್ಯಗಳನ್ನು ಕುರಿತ ಜನಗಣತಿಯ (೧೯೯೧) ವರದಿಯ ಪ್ರಕಾರ ಕರ್ನಾಟಕದಲ್ಲಿ ಶೇಕಡ ೨೦ ರಷ್ಟು ಕುಟುಂಬಗಳು ಮಾತ್ರ ಈ ಸೌಲಭ್ಯಗಳನ್ನು ಹೊಂದಿದ್ದರೆ, ಪರಿಶಿಷ್ಟ ಜಾತಿ, ಜನಾಂಗಗಳಿಗೆ ಸೇರಿದ ಶೇಕಡ ೭ ರಷ್ಟು ಕುಟುಂಬಗಳು ಮಾತ್ರ ಈ ಸೌಲಭ್ಯಗಳನ್ನು ಹೊಂದಿವೆ. ಗ್ರಾಮೀಣ ಪ್ರದೇಶಗಳಲ್ಲಿ ಪರಿಸ್ಥಿತಿ ಇನ್ನೂ ಕೆಟ್ಟಿದೆ.

ಸರ್ಕಾರಿ ಉದ್ಯೋಗಗಳಲ್ಲಿ ಪರಿಶಿಷ್ಟ ಜಾತಿ, ಜನಾಂಗಗಳ ಜನರಿಗೆ ಎಷ್ಟರಮಟ್ಟಿಗೆ ಪ್ರಾತಿನಿಧ್ಯ ಇದೆ ಎಂಬುದು ಈ ವರ್ಗಗಳ ಜನರ ಅಭಿವೃದ್ಧಿಯಲ್ಲಿ ಗಮನಿಸಬೇಕಾದ ಮತ್ತೊಂದು ಪ್ರಮುಖ ಅಂಶ. ಸರ್ಕಾರಿ ಉದ್ಯೋಗಗಳಲ್ಲಿ ಈ ಎರಡೂ ವರ್ಗಗಳ ಪಾಲು ಶೇಕಡ ೧೭ ಆಗಿದ್ದು, ಇದು ಸಂವಿಧಾನದಲ್ಲಿ ಒದಗಿಸಿರುವ ಪಾಲಿಗಿಂತ ಕಡಿಮೆಯಾಗಿದೆ. ಕರ್ನಾಟಕದ ಸರ್ಕಾರದಲ್ಲಿನ ಅನೇಕ ರೀತಿಯ ಹುದ್ದೆಗಳಲ್ಲಿ ಈ ಎರಡೂ ವರ್ಗಗಳ ಪ್ರಾತಿನಿಧ್ಯ ಬಹಳ ಏರುಪೇರುಗಳಿಂದ ಕೂಡಿರುವುದು ಇನ್ನೂ ಪ್ರಮುಖವಾದ ಅಂಶವಾಗಿದೆ. ಕರ್ನಾಟಕ ರಾಜ್ಯದ ಸಿವಿಲ್ ಹುದ್ದೆಗಳ ಪೈಕಿ ಗೆಜೆಟೆಡ್ ಪ್ರಥಮ ದರ್ಜೆ ಮತ್ತು ಎರಡನೆ ದರ್ಜೆಯ ಹುದ್ದೆಗಳಲ್ಲಿ ಪರಿಶಿಷ್ಟ ಜಾತಿ, ಜನಾಂಗದ ಜನರ ಪಾಲು ಶೇಕಡ ೭.೧೭ ಮಾತ್ರ ಇರುವುದು ಗಮನಾರ್ಹವಾದ ಅಂಶವಾಗಿದೆ. ಇದನ್ನು ಪಟ್ಟಿ ೩ ರಲ್ಲಿ ಕಾಣಬಹುದು. ಸಂವಿಧಾನದಲ್ಲಿ ಒದಗಿಸಿರುವ ಪ್ರಮಾಣದಲ್ಲಿ ಉನ್ನತ ದರ್ಜೆಯ ಹುದ್ದೆಗಳು ಈ ವರ್ಗಗಳ ಜನರಿಗೆ ದೊರೆಯದೆ ಇರುವುದರಿಂದ ಅತೃಪ್ತಿ, ಅಸಮಾಧಾನಗಳು ಉಂಟಾಗುವುದೇ ಅಲ್ಲದೆ, ಸಂವಿಧಾನಕ್ಕೂ ಅಗೌರವ ತೋರಿದಂತೆ ಆಗುತ್ತದೆ.

ಪಟ್ಟಿ ೩: ೩೧.೩.೧೯೯೩ ರಂದು ಇದ್ದಂತೆ ಕರ್ನಾಟಕದ ಸಿವಿಲ್ ಹುದ್ದೆಗಳಲ್ಲಿ ಪರಿಶಿಷ್ಟ ಜಾತಿ, ಜನಾಂಗಗಳ ಜನರ ಪಾಲು (ಕಂಸದಲ್ಲಿ ಕೊಟ್ಟಿರುವುದು ಶೇಕಡ ಸಂಖ್ಯೆ)

| ಕ್ರ. ಸಂ. | ಗುಂಪು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿ ಮಾಡಿದ ಹುದ್ದೆಗಳ ಸಂಖ್ಯೆ | ಈ ಪೈಕಿ ಪರಿಶಿಷ್ಟ ಜಾತಿಗಳ ಜನರು | ಪರಿಶಿಷ್ಟ ಜನಾಂಗದ ಜನರು |
|---|---|---|---|---|---|
| ೧ | ಎ | ೧೪೩೯೩ | ೧೨೭೧೪ | ೧೬೧೪ | ೩೩೦ |
| | | (೮೮.೩೩) | (೧೨.೬೯) | (೨.೬೦) | |
| ೨ | ಬಿ | ೨೫೩೫೯ | ೨೧೪೦೮ | ೨೦೬೭ | ೪೪೪ |
| | | (೮೪.೪೨) | (೯.೬೬) | (೨.೦೭) | |
| ೩ | ಸಿ | ೩೧೮೫೩೬ | ೨೮೯೫೯೩ | ೩೭೧೪೭ | ೬೭೪೫ |
| | | (90.91) | (12.83) | (2.33) | |
| ೪ | ಡಿ | ೧೧೧೪೫೧ | ೯೬೩೨೧ | ೨೦೩೩೯ | ೩೪೮೦ |
| | | (86.42) | (21.12) | (3.61) | |

ಮೂಲ: ೧೯೯೩ ರಲ್ಲಿ ಕರ್ನಾಟಕ ರಾಜ್ಯದ ಸಿವಿಲ್ ಸೇವೆಗಳಲ್ಲಿ ಪರಿಶಿಷ್ಟ ಜಾತಿ, ಜನಾಂಗಗಳ ಪ್ರಾತಿನಿಧ್ಯ ಕುರಿತ ವರದಿ.

## ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಜನಾಂಗಗಳ ಅಭಿವೃದ್ಧಿ ಕಾರ್ಯಕ್ರಮಗಳು

ಮೇಲಿನ ವಿವರಣೆಯಿಂದ ಕರ್ನಾಟಕದಲ್ಲಿ ಇತರರಿಗೆ ಹೋಲಿಸಿದಾಗ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗಗಳ ಜನರ ಅಭಿವೃದ್ಧಿಯಲ್ಲಿ ಹೆಚ್ಚಿನ ಅಸಮತೋಲನ ಇರುವುದೂ, ಅಭಿವೃದ್ಧಿಯ ಕೆಲವು ಪ್ರಮುಖ ಸೂಚಿಗಳ ದೃಷ್ಟಿಯಿಂದ ಈ ವರ್ಗಗಳ ಜನರು ಅನೇಕ ಸೌಲಭ್ಯಗಳಿಂದ ವಂಚಿತರಾಗಿರುವುದೂ ಸ್ಪಷ್ಟವಾಗುತ್ತದೆ. ಈ ವರ್ಗಗಳ ಜನರ ಸಾಮಾಜಿಕ, ಆರ್ಥಿಕ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡಿದೆ. ಸಾಮಾನ್ಯವಾಗಿ ದುರ್ಬಲ ವರ್ಗಗಳಿಗೆಂದು ಹಾಗೂ ವಿಶೇಷವಾಗಿ ಪರಿಶಿಷ್ಟ ಜಾತಿ, ಪರಿಶಿಷ್ಟ ಜನಾಂಗಗಳಿಗೆಂದು ರೂಪಿಸಲಾಗಿರುವ ಎರಡು ಪ್ರಮುಖ ಕಾರ್ಯಕ್ರಮಗಳೆಂದರೆ ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮ (ಐಆರ್ ಡಿಪಿ)ಹಾಗೂ ಜವಹರ್ ರೋಜ್‌ಗಾರ್ ಯೋಜನಾ (ಜೆ. ಆರ್ ವೈ). ಐಆರ್ ಡಿಪಿಯಡಿ ಗ್ರಾಮೀಣ ಬಡ ಕುಟುಂಬಗಳಿಗೆ ಸಬ್ಸಿಡಿ ಸಹಿತ ಸಾಲ ಒದಗಿಸುವ ಮೂಲಕ ಅವು ಆಸ್ತಿಗಳನ್ನು ಹೊಂದಲು ಅಥವಾ ಉತ್ಪಾದಕತೆಯನ್ನು ಸುಧಾರಿಸಿ ಹೆಚ್ಚಿನ ವರಮಾನ ಗಳಿಸಲು ನೆರವು ನೀಡಲಾಗುತ್ತದೆ. ಅದೇ ರೀತಿ ಜೆ. ಆರ್. ವೈ ಕುಶಲರಲ್ಲದ ಕಾರ್ಮಿಕರಿಗೆ ಪೂರಕ ಉದ್ಯೋಗಾವಕಾಶಗಳನ್ನೊದಗಿಸುವ ಸಮಗ್ರ ಉದ್ಯೋಗ

ಯೋಜನೆಯಾಗಿದೆ. ೧೦೦ ಬಾವಿಗಳ ಕಾರ್ಯಕ್ರಮ, ಜೀತ ಕಾರ್ಮಿಕರ ಮರುವಸತಿ, ಟ್ರೈಸೆಮ್ (ಸ್ವ-ಉದ್ಯೋಗ ಹೊಂದಲು ಗ್ರಾಮೀಣ ಯುವಜನರಿಗೆ ತರಬೇತಿ ನೀಡುವ ಕಾರ್ಯಕ್ರಮ) ಮತ್ತು (ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿ) ಈ ಎಲ್ಲ ಕಾರ್ಯಕ್ರಮಗಳ ಫಲಾನುಭವಿಗಳ ಪೈಕಿ ಶೇಕಡ ೩೦ಕ್ಕೂ ಹೆಚ್ಚು ಜನರನ್ನು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಂದ ಆರಿಸಬೇಕಾದ್ದು ಕಡ್ಡಾಯ. ಅದೇ ರೀತಿ ಆರ್. ಎಲ್. ಇ. ಜಿ. ಪಿ. (ಗ್ರಾಮೀಣ ಭೂರಹಿತರಿಗೆ ಉದ್ಯೋಗ ಖಾತರಿ ಕಾರ್ಯಕ್ರಮ) ಕಾರ್ಯಕ್ರಮಕ್ಕೆ ಒದಗಿಸಲಾದ ಹಣದ ಶೇಕಡ ೧೫ ರಷ್ಟನ್ನು ಪರಿಶಿಷ್ಟ ಜಾತಿ, ಜನಾಂಗಗಳ ಕಾಲೋನಿಗಳಲ್ಲಿ ಮನೆಯನ್ನು ಕಟ್ಟಲು, ನಿವೇಶನಗಳನ್ನು ರಚಿಸಲು ಹಾಗೂ ಚರಂಡಿಗಳನ್ನು ನಿರ್ಮಿಸಲು ಮೀಸಲಿಡಬೇಕು ಮತ್ತು ಈ ಕಾಮಗಾರಿಗಳಲ್ಲಿ ತೊಡಗುವ ಒಟ್ಟು ಕಾರ್ಮಿಕರಲ್ಲಿ ಶೇಕಡ ೫೦ ರಷ್ಟು ಜನರನ್ನು ಈ ಪಂಗಡಗಳ ಕುಟುಂಬಗಳಿಂದ ಆರಿಸಬೇಕು.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗಗಳ ಅಭಿವೃದ್ಧಿಯನ್ನು ಸಾಂಸ್ಥಿಕ ಚೌಕಟ್ಟಿಗೊಳಪಡಿಸುವ ಕ್ರಮವನ್ನು ದೇಶದ ಇತರ ರಾಜ್ಯಗಳಲ್ಲಿ ಕೈಗೊಂಡಂತೆ ಕರ್ನಾಟಕ ರಾಜ್ಯದಲ್ಲಿಯೂ ಕೈಗೊಳ್ಳಲಾಗಿದೆ. ವಿಶೇಷ ಕಾರ್ಯಕ್ರಮಗಳ ಮೂಲಕ ಈ ವರ್ಗಗಳ ಜನರ ಸಾಮಾಜಿಕ - ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಲು ೧೯೭೫ ರಲ್ಲಿ ಕರ್ನಾಟಕ ರಾಜ್ಯ ಪರಿಶಿಷ್ಟ ಜಾತಿ, ಪರಿಶಿಷ್ಟ ಜನಾಂಗಗಳ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಲಾಯಿತು. ಈ ನಿಗಮ ವಿಶೇಷ ಘಟಕ ಯೋಜನೆಯನ್ನು ಜಾರಿಗೊಳಿಸುತ್ತಿದೆ. ಇದರಡಿ, ಈ ವರ್ಗಗಳಿಗೆ ಸೇರಿದ ಕೃಷಿ ಕಾರ್ಮಿಕರು ಸಣ್ಣ, ಅತಿ ಸಣ್ಣ ರೈತರು, ಕುಶಲಕರ್ಮಿಗಳು, ವಿದ್ಯಾವಂತ ನಿರುದ್ಯೋಗಿ ಯುವಜನರು, ಗ್ರಾಮೀಣ ಮತ್ತು ನಗರಗಳಿಗೆ ಸೇರಿದ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗಗಳಿಗೆ ಸೇರಿದ ಇತರ ದುರ್ಬಲರಿಗೆ 'ಭೂಮಿ ಕೊಳ್ಳುವ ಪರಿಯೋಜನೆ' 'ವೈಯಕ್ತಿಕ ನೀರಾವರಿ ಕೊಳವೆ ಬಾವಿ ಪರಿಯೋಜನೆ' 'ಸ್ವ-ಉದ್ಯೋಗ ಕಾರ್ಯಕ್ರಮ', 'ಹೈನುಗಾರಿಕೆ ಚಟುವಟಿಕೆಗಳು', 'ಎತ್ತುಗಳು ಮತ್ತು ಗಾಡಿಗಳು ಪರಿಯೋಜನೆ', 'ಸಣ್ಣ ತೋಟಗಾರಿಕೆಯಲ್ಲಿ ತೊಡಗಿರುವವರಿಗೆ ನೆರವು' (ತೆಂಗು ಮತ್ತು ಮಾವು ಬೆಳೆಯುವವರಿಗೆ) ಮುಂತಾದ ಪರಿಯೋಜನೆಗಳಡಿ ಸಬ್ಸಿಡಿ ಸಹಿತ ಸಾಲದ ಆಧಾರದ ಮೇಲೆ ನೆರವು ನೀಡಲಾಗುತ್ತಿದೆ. ಈ ಎಲ್ಲ ಪರಿಯೋಜನೆಗಳಿಗೆ ಶೇಕಡ ೫೦ ಕ್ಕೂ ಹೆಚ್ಚಿನ ಸಬ್ಸಿಡಿ ನೀಡಲಾಗುತ್ತಿದೆ. ಆದರೆ ವೈಯಕ್ತಿಕ ಕೊಳವೆಬಾವಿ ಯೋಜನೆಗೆ ಮಾತ್ರ ಶೇಕಡ ೭೫ ರ ಸಬ್ಸಿಡಿ ನೀಡಲಾಗುತ್ತಿದೆ. ಇದೇ ರೀತಿ ಗುಡ್ಡಗಾಡು ಉಪಯೋಜನೆ (ಟ್ರೈಬಲ್ ಸಬ್ ಪ್ಲಾನ್ -ಎಸ್ ಪಿ) ಪರಿಶಿಷ್ಟ ಪಂಗಡಗಳ ಜನರ ದಾರಿದ್ರ್ಯವನ್ನು ತಗ್ಗಿಸುವ ಹಾಗೂ ಶುದ್ಧ

ಕುಡಿಯುವ ನೀರು, ವಿದ್ಯುತ್, ರಸ್ತೆಗಳು, ವಸತಿ, ಚರಂಡಿ ವ್ಯವಸ್ಥೆ ಮತ್ತಿತರ ಮೂಲಭೂತ ಸೌಲಭ್ಯಗಳನ್ನು ಅವರಿಗೆ ಒದಗಿಸುವ ಗುರಿ ಹೊಂದಿದ ಸಮಗ್ರ ಸಂಘಟಿತ ಯೋಜಿತ ಪ್ರಯತ್ನವಾಗಿದೆ.

ಈ ಎರಡೂ ಕಾರ್ಯಕ್ರಮಗಳ (ವಿಶೇಷ ಘಟಕ ಯೋಜನೆ ಮತ್ತು ಗುಡ್ಡಗಾಡು ಉಪಯೋಜನೆ) ಪರಿಣಾಮಕಾರಿ ಅನುಷ್ಠಾನಕ್ಕಾಗಿ ಹಳ್ಳಿಗಳನ್ನು ಗುಂಪುಗಳನ್ನಾಗಿ ಮಾಡಿ ಅವುಗಳ ಅಭಿವೃದ್ಧಿಗೆ ಪ್ರಯತ್ನಿಸುವ ಮಾರ್ಗವನ್ನು ಅನುಸರಿಸಲಾಯಿತು. ಇದರಲ್ಲಿ ಒಂದು ಮೀಸಲು ಕ್ಷೇತ್ರದ ಐದು ಹಳ್ಳಿಗಳನ್ನೂ, ಸಾಮಾನ್ಯ ಕ್ಷೇತ್ರದ ಎರಡು ಹಳ್ಳಿಗಳನ್ನೂ ಆರಿಸಿ ಎಲ್ಲ ಇಲಾಖೆಗಳ ಕಾರ್ಯಕ್ರಮಗಳನ್ನು ಈ ಹಳ್ಳಿಗಳ ಗುಂಪುಗಳಲ್ಲಿ ಕೇಂದ್ರೀಕರಿಸಲಾಯಿತು. ಆದರೆ ಇಂತಹ ವಿಧಾನದಿಂದ ಉದ್ದೇಶಿತ ಗುರಿ ಸಮರ್ಪಕವಾಗಿ ಈಡೇರದೆ ಇದ್ದುದರ ಪರಿಣಾಮವಾಗಿ ಅದನ್ನು ಕೈಬಿಡಲಾಯಿತು. ಇದರ ಬದಲಿಗೆ ಕಾರ್ಯಕ್ರಮಗಳ ಪ್ರಯೋಜನವನ್ನು ಒದಗಿಸಲು ಪ್ರತಿ ವರ್ಷ ಒಂದು ನಿರ್ದಿಷ್ಟ ಸಂಖ್ಯೆಯ ಹಳ್ಳಿಗಳನ್ನು ಆರಿಸುವ "ಪ್ರಾಜೆಕ್ಟ್ ನೀತಿ"ಗೆ ಈಗ ಒತ್ತು ನೀಡಲಾಗುತ್ತಿದೆ. ರಾಜ್ಯದ ವಲಯದಲ್ಲಿ ಅನೇಕ ಪರಿಯೋಜನೆಗಳಡಿ ಇರುವ ನಿಧಿಗಳನ್ನು ಒಟ್ಟುಗೂಡಿಸಲಾಗುವುದು ಹಾಗೂ ಪ್ರತಿಯೊಂದು ಇಲಾಖೆಯೂ ಪ್ರಾಜೆಕ್ಟ್‌ಗಳನ್ನು ಸಿದ್ಧಪಡಿಸುತ್ತದೆ ಮತ್ತು ಇವುಗಳಲ್ಲಿ ಪರಿಶಿಷ್ಟ ಜಾತಿ, ಜನಾಂಗಗಳ ಅಗತ್ಯಗಳನ್ನೂ ಗುರುತಿಸಲಾಗುವುದು.

ಪರಿಶಿಷ್ಟ ಜಾತಿ, ಪರಿಶಿಷ್ಟ ಜನಾಂಗಗಳಿಗೆ ಸೇರಿದವರಲ್ಲಿ ಶೇಕಡ ೩೦ಕ್ಕೂ ಹೆಚ್ಚು ಜನರು ದಾರಿದ್ರ್ಯವಿರೋಧಿ ಕಾರ್ಯಕ್ರಮಗಳ ಪ್ರಯೋಜನ ಪಡೆದಿದ್ದಾರೆ ಎಂಬುದು ಈ ಕಾರ್ಯಕ್ರಮಗಳ ಮೌಲ್ಯಮಾಪನ ಮಾಡಿದ ಬಹುತೇಕ ಅಧ್ಯಯನಗಳು ಸಾಮಾನ್ಯವಾಗಿ ಕಂಡುಕೊಂಡ ಅಂಶವಾಗಿದೆ. ಅನೇಕ ಪರಿಯೋಜನೆಗಳಡಿ ನೀಡಲಾದ ಕರೆಯುವ ಹಸುಗಳು, ಎತ್ತುಗಳು, ಗಾಡಿಗಳು ಮುಂತಾದ ಆಸ್ತಿಗಳನ್ನು ಫಲಾನುಭವಿಗಳಲ್ಲಿ ಹೆಚ್ಚಿನವರು ಮಾಡಿಕೊಂಡಿದ್ದಾರೆ ಎಂದೂ ಈ ಅಧ್ಯಯನಗಳು ತಿಳಿಸುತ್ತವೆ. ಒಂದು ಕಡೆ ಪಡೆದುಕೊಂಡ ವಸ್ತುಗಳ ಕಳಪೆ ಗುಣಮಟ್ಟ ಹಾಗೂ ಇನ್ನೊಂದು ಕಡೆ ಬಾಕಿ ಇರುವ ಸಾಲ ತೀರಿಸಬೇಕೆಂದು ಅಧಿಕಾರಿಗಳ ಒತ್ತಾಯ ಈ ಕಾರಣಗಳಿಂದ ಫಲಾನುಭವಿಗಳು ತಮ್ಮ ಆಸ್ತಿಗಳನ್ನು ಮಾರಿಕೊಳ್ಳಬೇಕಾಗಿ ಬಂದಿದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗಗಳಿಗೆ ಸೇರಿದ ಜನರಿಗೆ ಭೂಮಿಯನ್ನು ವಿತರಿಸುವ ಕಾರ್ಯವನ್ನು ಪರಿಶಿಷ್ಟ ಜಾತಿ, ಜನಾಂಗಗಳ ಅಭಿವೃದ್ಧಿ ನಿಗಮ ಕೈಗೊಂಡಿದ್ದರೂ ಈ ಕಾರ್ಯಕ್ರಮದ ಯಶಸ್ಸು ಹಂಚಿಕೆಗಾಗಿ ಲಭ್ಯವಿರುವ ಜಮೀನಿನ ಪ್ರಮಾಣವನ್ನು ಅವಲಂಬಿಸಿದೆ. ಇಡೀ ರಾಜ್ಯದಲ್ಲಿ ನಿಗಮ ಹಂಚಿರುವ ಒಟ್ಟು

ಭೂಮಿಯಲ್ಲಿ ಬಳ್ಳಾರಿ, ಬೀದರ್, ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳ ಪಾಲು ಶೇಕಡ ೫೪ ಆಗಿದ್ದರೆ ಉಳಿದ ಎಲ್ಲ ಜಿಲ್ಲೆಗಳ ಪಾಲು ಶೇಕಡ ೪೬ ಎಂಬುದು ಗಮನಿಸಬೇಕಾದ ಅಂಶ. ಉಳಿದ ಜಿಲ್ಲೆಗಳಿಗಿಂತ ಹೆಚ್ಚಾಗಿ ಮೇಲೆ ತಿಳಿಸಿದ ನಾಲ್ಕು ಜಿಲ್ಲೆಗಳಲ್ಲಿ ಹತಾಶ ಮಾರಾಟದಿಂದಾಗಿ ಸಾಗುವಳಿಯೋಗ್ಯ ಭೂಮಿಯ ಲಭ್ಯತೆ ಅಧಿಕವಾಗಿರುವ ಸಾಧ್ಯತೆ ಇದೆ ಎಂಬುದೇ ಇದರ ಅರ್ಥ. ನಿಗಮದ ಆರ್ಥಿಕ ತಳಹದಿಯೂ ದುರ್ಬಲವಾಗಿದೆ. ತನಗೆ ಒದಗಿಸಲಾಗುವ ಹಣದ ಪ್ರಮಾಣದ ಅನಿಶ್ಚಯತೆಯಿಂದಾಗಿ ನಿಗಮ ವರ್ಷದಿಂದ ವರ್ಷದ ಆಧಾರದ ಮೇಲೆ ತನ್ನ ಕಾರ್ಯಯೋಜನೆಯನ್ನು ರೂಪಿಸಬೇಕಾಗಿದೆ. ಈಗ ನಿಗಮಕ್ಕೆ ಬಜೆಟ್‌ನ ಬೆಂಬಲವೂ ಇಲ್ಲ ಹಾಗೂ ಅದು ಹೊರಗಡೆಯಿಂದ ಪಡೆಯಬಹುದಾದ ಸಾಲಗಳಿಗೆ ಸರ್ಕಾರದ ಗ್ಯಾರಂಟಿಯೂ ಇಲ್ಲ. ಇದರ ಪರಿಣಾಮವಾಗಿ ನಿಗಮ ರಾಷ್ಟ್ರೀಯ ಪರಿಶಿಷ್ಟ ಜಾತಿ, ಜನಾಂಗಗಳ ಹಣಕಾಸು ಮತ್ತು ಅಭಿವೃದ್ಧಿ ನಿಗಮದಿಂದ ಸಾಲಗಳನ್ನು ಪಡೆಯುವುದು ಸಾಧ್ಯವಾಗಿಲ್ಲ. ಪರಿಶಿಷ್ಟ ಜಾತಿ, ಜನಾಂಗಗಳಿಗೆ ಸೇರಿದ ಜನರ ಅಭಿವೃದ್ಧಿಗಾಗಿ ಸಮಾಜ ಕಲ್ಯಾಣ ಇಲಾಖೆಗೆ ಒದಗಿಸುವ ಎಲ್ಲ ಹಣವನ್ನು ಖರ್ಚು ಮಾಡುವ ಹೊಣೆಯನ್ನು ಪರಿಶಿಷ್ಟ ಜಾತಿ, ಜನಾಂಗಗಳ ಅಭಿವೃದ್ಧಿ ನಿಗಮಕ್ಕೆ ವಹಿಸುವ ಹಾಗೂ ಈ ವರ್ಗಗಳ ಅಭಿವೃದ್ಧಿಯ ಗುರಿ ಹೊಂದಿದ ಪರಿಯೋಜನೆಗಳ ಅನುಷ್ಠಾನಕ್ಕೆ ನಿಗಮವನ್ನು ಮುಖ್ಯ ಏಜೆನ್ಸಿಯನ್ನಾಗಿ ಮಾಡುವ ಅಗತ್ಯ ಈಗ ಬಹಳ ತುರ್ತಾಗಿದೆ.

### ಭವಿಷ್ಯದ ಗುರಿಗಳು

ಪರಿಶಿಷ್ಟ ಜಾತಿ, ಜನಾಂಗಗಳ ಜನರಿಗಾಗಿ ರೂಪಿಸಿಕೊಳ್ಳಲಾಗಿರುವ ಅನೇಕ ಅಭಿವೃದ್ಧಿ ಯೋಜನೆಗಳ ಕಾರ್ಯಸಾಧನೆ ಕಳಪೆಯಾಗಿರುವ ದೃಷ್ಟಿಯಿಂದ ಈ ವರ್ಗಗಳಿಗೆ ಸೇರಿದ ಜನರ ಅಭಿವೃದ್ಧಿಗಾಗಿ ನಿರ್ದಿಷ್ಟ ನೀತಿಯನ್ನು ಹೊಂದಬೇಕಾದ ಅಗತ್ಯ ಬಹಳವಾಗಿದೆ. ಜಮೀನು ಅಥವಾ ಅಂತಹ ಬಲವಾದ ಆಸ್ತಿಯ ತಳಪಾಯವನ್ನು ಈ ಜನರಿಗಾಗಿ ಸೃಷ್ಟಿಸುವುದು ಅಂತಹ ನೀತಿಯ ಗುರಿಯಾಗಬೇಕು. ಈಗಾಗಲೇ ಜಾರಿಯಲ್ಲಿರುವ ಭೂ ಸುಧಾರಣೆಯಂತಹ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ಜಾರಿಗೊಳಿಸುವ ಮೂಲಕ ಪರಿಶಿಷ್ಟ ಜಾತಿ, ಜನಾಂಗಗಳ ಅಭಿವೃದ್ಧಿಗಾಗಿ ಕಾಲಮಿತಿಯ ಚೌಕಟ್ಟನ್ನು ಹೊಂದಲು ನೀತಿ ನಿರೂಪಕರು ಮತ್ತು ಆಡಳಿತಗಾರರು ಸಂಕಲ್ಪ ಮಾಡಬೇಕು. ಈ ದಿಸೆಯಲ್ಲಿ ರಾಜ್ಯದ ಪ್ರಸಕ್ತ ಸರ್ಕಾರ ಭೂ ಸುಧಾರಣಾ ಕ್ರಮಗಳನ್ನು ಮಾರ್ಪಡಿಸಿ ಕಟ್ಟುನಿಟ್ಟಾಗಿ ಜಾರಿಗೊಳಿಸಲು ನಿರ್ಧರಿಸಿರುವುದು ಸ್ವಾಗತಾರ್ಹ ನೀತಿಯಾಗಿದೆ. ಭೂ ಸುಧಾರಣಾ ಕ್ರಮಗಳ ಅನುಷ್ಠಾನದ ಬಗ್ಗೆ ಒಂದು ಅಂಶವನ್ನು ಇಲ್ಲಿ ಗಮನಿಸಬೇಕಾಗಿದೆ. ಭೂ ನ್ಯಾಯಮಂಡಳಿಗಳು ಅನುಮೋದಿಸಿದ ಗೇಣಿದಾರರ

ಹಕ್ಕು ಕೋರಿಕೆಗಳ ಪೈಕಿ ಶೇಕಡ ೭೫ ರಷ್ಟು ಕೋರಿಕೆಗಳು ಕರ್ನಾಟಕದ ಆರು ಜಿಲ್ಲೆಗಳಿಗೆ ಸೇರಿದ್ದಾಗಿದ್ದವು ಹಾಗೂ ಉಳಿದ ೨೫ ರಷ್ಟು ಕೋರಿಕೆಗಳು ಮಾತ್ರ ಉಳಿದ ಎಲ್ಲ ಜಿಲ್ಲೆಗಳಿಗೆ ಸೇರಿವೆ ಎಂದು ಹೇಳಲಾಗಿದೆ. ಅದೇ ರೀತಿ ಗೇಣಿದಾರರಿಗೆ ವರ್ಗಾಯಿಸಲಾದ ಭೂಮಿಯ ಶೇಕಡ ೭೯ ರಷ್ಟು ಭೂಮಿಯೂ ಈ ಆರು ಜಿಲ್ಲೆಗಳಿಗೇ ಸೇರಿದ್ದು, ಉಳಿದ ಶೇಕಡ ೨೧ ರಷ್ಟು ಭೂಮಿ ಇತರ ಜಿಲ್ಲೆಗಳದ್ದಾಗಿದೆ ಎಂದೂ ಹೇಳಲಾಗಿದೆ. ಗೇಣಿದಾರರಿಂದ ಅರ್ಜಿಗಳನ್ನು ಪಡೆಯಲು ಜಿಲ್ಲಾ ಆಡಳಿತಗಳು ಸಾಕಷ್ಟು ಪ್ರಯತ್ನ ಮಾಡದೆ ಇದ್ದದ್ದು, ಅರ್ಜಿ ಕೊಡದೆ ಇರುವಂತೆ ಭೂ ಮಾಲೀಕರು ಗೇಣಿದಾರರ ಮೇಲೆ ಹಾಕಿದ ಒತ್ತಡ ಹಾಗೂ ಗೇಣಿದಾರರಲ್ಲಿ ಭೂ ಸುಧಾರಣಾ ಕಾನೂನಿನ ಅರಿವು ಇಲ್ಲದೆ ಇದ್ದದ್ದು ಇಷ್ಟು ದೊಡ್ಡ ಪ್ರಮಾಣದ ವ್ಯತ್ಯಾಸಕ್ಕೆ ಕಾರಣಗಳಾಗಿವೆ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗಗಳು ಹಾಗೂ ಇತರ ವರ್ಗಗಳು ಹೊಂದಿರುವ ಭೂ ಹಿಡುವಳಿಗಳಲ್ಲಿನ ಅಸಮಾನತೆಯನ್ನು ತಗ್ಗಿಸಲು ಗ್ರಾಮೀಣ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ, ಜನಾಂಗಗಳ ಜನರಿಗೆ ಸರ್ಕಾರದ ಸ್ವಾಧೀನದಲ್ಲೇ ಇರುವ ಬಾಕಿ ಭೂಮಿಯನ್ನು ಹಂಚುವ ಸಮಯ ಈಗ ಬಂದಿದೆ. ರಾಜ್ಯದಲ್ಲಿ ಪ್ರತಿ ಹಳ್ಳಿಯಲ್ಲಿ ಲಭ್ಯವಿರುವ ಸರ್ಕಾರಿ ಜಮೀನಿನ ಸರಾಸರಿ ಗಾತ್ರ ೪೯.೧೧ ಎಕರೆ ಎಂದು ಒಂದು ಅಂದಾಜು ಸೂಚಿಸಿದೆ. ಸರ್ಕಾರಕ್ಕೆ ಸೇರಿದ ಜಮೀನಿನಲ್ಲಿ ಕನಿಷ್ಠ ಶೇಕಡ ೫೦ ರಷ್ಟನ್ನು ಪರಿಶಿಷ್ಟ ಜಾತಿ, ಜನಾಂಗಗಳಿಗೆ ಸೇರಿದವರಿಗೆ ನೀಡಬೇಕೆಂಬ ರಾಜ್ಯದ ೧೯೭೯ರ ಭೂ ನೀಡಿಕೆ ನಿಯಮಗಳನ್ನು ಕಟ್ಟುನಿಟ್ಟಾಗಿ ಜಾರಿಗೆ ತರಬೇಕು.

ಪರಿಶಿಷ್ಟ ಜಾತಿ, ಜನಾಂಗಗಳ ಫಲಾನುಭವಿಗಳಿಗೆ ಭೂಮಿಯನ್ನು ಹಂಚಿದರಷ್ಟೇ ಸಾಲದು. ಅವರು ಈ ಭೂಮಿಯನ್ನು ಅವಲಂಬಿಸಿ ತಮ್ಮ ಕಾಲ ಮೇಲೆ ನಿಲ್ಲುವಂತೆ ಮಾಡಲು ನೀರಾವರಿ, ವಿದ್ಯುತ್, ದೃಢಕಾಯದ ಎತ್ತುಗಳು, ನೇಗಿಲು ಮತ್ತಿತರ ಸೌಲಭ್ಯ ಸಾಧನಗಳನ್ನು ಸಹ ಅವರಿಗೆ ಸುಲಭ ಸಾಲದ ರೂಪದಲ್ಲಿ ಒದಗಿಸಬೇಕಾದ ಅಗತ್ಯವಿದೆ. ಇದಕ್ಕೆ ಸಂಬಂಧಿಸಿದಂತೆ ಪರಿಶಿಷ್ಟ ಜಾತಿ, ಜನಾಂಗಗಳ ಅಭಿವೃದ್ಧಿ ನಿಗಮ ಮತ್ತು ಸರ್ಕಾರದ ಇಲಾಖೆಗಳ ನಡುವೆ ಸಮನ್ವಯದ ಪ್ರಯತ್ನ ಅಗತ್ಯ. ಈ ವರ್ಗಗಳಿಗೆ ಸೇರಿದ ಎಲ್ಲ ಭೂರಹಿತ ಕೃಷಿ ಕಾರ್ಮಿಕರಿಗೆ ಒದಗಿಸುವಷ್ಟು ಸರ್ಕಾರಿ ಜಮೀನು ಲಭ್ಯವಿಲ್ಲದಿರುವ ಸಂದರ್ಭದಲ್ಲಿ ಈ ವರ್ಗಗಳ ಜನರ ಅದರಲ್ಲೂ ಗ್ರಾಮೀಣ ವಿದ್ಯಾವಂತ ನಿರುದ್ಯೋಗಿಗಳ ಅಭಿವೃದ್ಧಿಗಾಗಿ ಸ್ವ-ಉದ್ಯೋಗದ ಅವಕಾಶಗಳ ನಿರ್ಮಾಣ ಹಾಗೂ ಕೌಶಲ್ಯಗಳನ್ನು ಅಭಿವೃದ್ಧಿಪಡಿಸುವ ಚಟುವಟಿಕೆಗಳಂತಹ ಕಾರ್ಯಕ್ರಮಗಳನ್ನು ಪರಿಶಿಷ್ಟ ಜಾತಿ, ಜನಾಂಗಗಳ ಅಭಿವೃದ್ಧಿ ನಿಗಮದ ನೆರವಿನಿಂದ ಕೈಗೊಳ್ಳಬೇಕಾಗುತ್ತದೆ. ಈ ದಿಸೆಯಲ್ಲಿ ನಿಗಮ ಕಾರ್ಯಪ್ರವೃತ್ತವಾಗಿದ್ದರೂ, ಸಾಕಷ್ಟು

ಹಣಕಾಸಿನ ಕೊರತೆಯಿಂದಾಗಿ ಹಾಗೂ ತಮ್ಮ ಅಭಿವದ್ಧಿಗಾಗಿ ರೂಪಿಸಲಾಗಿರುವ ಪರಿಯೋಜನೆಗಳ ಬಗ್ಗೆ ಪರಿಶಿಷ್ಟ ಜಾತಿ, ಜನಾಂಗಗಳ ಜನರಲ್ಲಿ ಸಾಕಷ್ಟು ಅರಿವು ಇಲ್ಲದೆ ಇರುವುದರಿಂದ ಹೇಳಿಕೊಳ್ಳುವಂತಹ ಪ್ರಗತಿ ಆಗಿಲ್ಲ.

ವಸತಿ ಮತ್ತಿತರ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದಕ್ಕೆ ಸಂಬಂಧಿಸಿದಂತೆ ೧೯೯೨ ರ ರಾಷ್ಟ್ರೀಯ ವಸತಿ ನೀತಿಯಲ್ಲಿ ಈಗಾಗಲೇ ಸಲಹೆ ಮಾಡಿದಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗಗಳಿಗೆ ಸೇರಿದವರಿಗೆ ವಿಶೇಷವಾಗಿ ಪ್ರತ್ಯೇಕ ಯೋಜನೆಯೊಂದನ್ನು ರೂಪಿಸುವುದು ಹಾಗೂ ಹೆಚ್ಚು ಹಣ ಒದಗಿಸುವ ಮೂಲಕ ಇಂದಿರಾ ಆವಾಸ್ ಯೋಜನೆಯನ್ನು ಬಲಪಡಿಸುವುದು ರಾಜ್ಯ ಸರ್ಕಾರ ಈಗ ಕೈಗೊಳ್ಳಬೇಕಾದ ತುರ್ತು ಕ್ರಮಗಳಾಗಿವೆ. ಗ್ರಾಮೀಣ ಪ್ರದೇಶಗಳಲ್ಲಿ ಈ ವರ್ಗಗಳ ಜನರಿಗೆ ನಿವೇಶನಗಳನ್ನು ರಚಿಸುವಾಗ ಅಥವಾ ಮನೆಗಳನ್ನು ಕಟ್ಟುವಾಗ ಅವು ಹಳ್ಳಿಯ ಮಧ್ಯದಲ್ಲಿ ಇರುವಂತೆ ಎಚ್ಚರಿಕೆ ವಹಿಸಬೇಕಾಗುತ್ತದೆ. ಇದರಿಂದ ಈ ಜನರ ವಸತಿಗಳಿಗೆ ಕುಡಿಯಲು ನೀರು, ವಿದ್ಯುತ್, ರಸ್ತೆ ಮುಂತಾದ ಸೌಲಭ್ಯಗಳನ್ನು ಒದಗಿಸುವುದು ಸುಲಭವಾಗುತ್ತದೆ.

ವಿಕೇಂದ್ರೀಕೃತ ಆಡಳಿತದಿಂದಾಗಿ ಸಾಮಾನ್ಯವಾಗಿ ದುರ್ಬಲ ವರ್ಗಗಳಲ್ಲಿ ಮತ್ತು ವಿಶೇಷವಾಗಿ ಪರಿಶಿಷ್ಟ ಜಾತಿ, ಪರಿಶಿಷ್ಟ ಜನಾಂಗಗಳ ಜನರಲ್ಲಿ ಪರಿಣಾಮಕಾರಿ ನಾಯಕತ್ವ ಮೂಡಿ ಬಂದು ಆ ಮೂಲಕ ಅವರು ತಮ್ಮ ಕುಂದುಕೊರತೆಗಳನ್ನು ಪರಿಹರಿಸಿಕೊಳ್ಳಲು ಸಾಧ್ಯವಾಗುತ್ತದೆ ಎಂದು ನಂಬಲಾಗಿತ್ತು. ಆದರೆ ಶಾಸನ ಸಭೆಗಳಲ್ಲಿ ಮತ್ತು ಗ್ರಾಮ ಪಂಚಾಯಿತಿಯಂತಹ ಸ್ಥಳೀಯ ಸಭೆಗಳಲ್ಲಿ ಸೂಕ್ತ ತರಬೇತಿ ಮತ್ತು ಪ್ರೋತ್ಸಾಹದ ಕೊರತೆಯಿಂದಾಗಿ ಇಂತಹ ನಾಯಕತ್ವ ಮೂಡಿಬಂದಿಲ್ಲ. ಅನೇಕ ಪರಿಯೋಜನೆಗಳ ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಗ್ರಾಮ ಸಭೆಗಳಲ್ಲಿ ಆಯ್ಕೆ ಮಾಡುವುದರ ಬದಲಿಗೆ ಸ್ಥಳೀಯ ರಾಜಕಾರಣಿಗಳ ಸಲಹೆಯ ಮೇರೆಗೆ ಈ ಫಲಾನುಭವಿಗಳನ್ನು ಗುರುತಿಸುವುದು ಈಗಿನ ಪದ್ಧತಿಯಾಗಿದೆ. ಆದರೆ ಗ್ರಾಮ ಸಭೆಗಳಲ್ಲಿ ನಿಯಮಿತವಾಗಿ ನಡೆಸಿ, ಈ ಸಭೆಗಳ ಮೂಲಕ ಫಲಾನುಭವಿಗಳನ್ನು ಆಯ್ಕೆ ಮಾಡುವುದನ್ನು ಕಡ್ಡಾಯಗೊಳಿಸಬೇಕು. ಅಂತಿಮವಾಗಿ ಸರ್ಕಾರಗಳು ಈ ವರ್ಗಗಳ ಜನರ ಏಳಿಗೆಗಾಗಿ ನಿರ್ದಿಷ್ಟ ಯೋಜನೆಗಳನ್ನು ರೂಪಿಸಿ, ಜಾರಿಗೊಳಿಸುವಲ್ಲಿ ಹೆಚ್ಚಿನ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕು. ರಾಜ್ಯದಲ್ಲಿನ ಪರಿಶಿಷ್ಟ ಜಾತಿ, ಜನಾಂಗಗಳ ಜನರ ಸಾಮಾಜಿಕ-ಆರ್ಥಿಕ ಪರಿಸ್ಥಿತಿಗಳ ಸಮೀಕ್ಷೆ ನಡೆಸಿ, ಈ ಜನರ ಅಗತ್ಯಗಳ ಆಧಾರದ ಮೇಲೆ ಯೋಜನೆಯನ್ನು ರೂಪಿಸಿ ಒಂದು ಗೊತ್ತಾದ ಕಾಲಮಿತಿಯಲ್ಲಿ ಅದನ್ನು ಜಾರಿಗೊಳಿಸಬೇಕಾದ್ದು ರಾಜ್ಯ ಸರ್ಕಾರದ ಮುಂದಿನ ತುರ್ತು ಕಾರ್ಯಭಾರವಾಗಿದೆ.

# ಕರ್ನಾಟಕದ ರಾಜಕೀಯ ಸ್ವರೂಪ

**ಕೆ. ಎಸ್. ಕೃಷ್ಣಸ್ವಾಮಿ**

ಮುಂದಿನ ಹತ್ತಿಪ್ಪತ್ತು ವರ್ಷಗಳಲ್ಲಿ ಕರ್ನಾಟಕದ ರಾಜಕೀಯ ಸ್ವರೂಪ ಹೇಗಿರಬಹುದೆಂಬುದರ ಬಗ್ಗೆ ಸ್ಥೂಲವಾಗಿ ಊಹಿಸಲು ಮಾತ್ರ ಸಾಧ್ಯ. ಪ್ರಪಂಚದ ಎಲ್ಲಾ ಕ್ಷೇತ್ರಗಳಲ್ಲೂ ಆಗುತ್ತಿರುವ ಬದಲಾವಣೆಗಳ ಪ್ರಮಾಣ ಬಹು ದೊಡ್ಡದು. ಅವುಗಳ ವೇಗ ಮತ್ತು ದಿಸೆಗಳು ಅನಿಶ್ಚಿತ. ಅವೆಲ್ಲ ಒಂದಲ್ಲ ಒಂದು ರೀತಿ ಭಾರತದ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ವ್ಯವಸ್ಥೆಗಳ ಮೇಲೆ ಪರಿಣಾಮ ಬೀರುತ್ತಿವೆ. ಇದರ ಅಂಗವಾಗಿ ಕರ್ನಾಟಕದಲ್ಲೂ ನಾನಾ ತರಹ ಬದಲಾವಣೆಗಳನ್ನು ನಿರೀಕ್ಷಿಸಬಹುದು. ಇವಲ್ಲದೆ ಸ್ಥಳೀಯ ಕಾರಣಗಳಿಂದಲೂ ಕರ್ನಾಟಕದ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಗಳಲ್ಲಿ ಈಚೀಚೆಗೆ ಬಹಳ ಮಾರ್ಪಾಡುಗಳಾಗಿವೆ, ಆಗುತ್ತಿವೆ. ಹೀಗಿರುವಾಗ ೨೧ನೇ ಶತಮಾನದ ಮೊದಲ ದಶಕದ ವೇಳೆಗೆ ಇಲ್ಲಿಯ ರಾಜಕೀಯ ಸ್ಥಿತಿ, ವ್ಯವಸ್ಥೆಗಳು ಹೇಗಿರಬಹುದೆನ್ನುವುದು ಒಂದು ಯಕ್ಷಪ್ರಶ್ನೆಯೇ ಆದೀತು. ಯಾವ ಊಹೆ ಸರಿ, ಯಾವುದು ಸರಿಯಲ್ಲ ಎಂದು ತುಲನೆ ಮಾಡಲು ಯಾವ ಆಧಾರಗಳೂ ಸಿಕ್ಕುವುದಿಲ್ಲ. ಈ ಕಾರಣ ಇಲ್ಲಿ ಚಿತ್ರಿಸಿರುವ ಸ್ವರೂಪ ನನ್ನ ಊಹೆಯೆಂದು ಹೇಳಲು ಮಾತ್ರ ಸಾಧ್ಯ.

೧

ಸ್ವಾತಂತ್ರ್ಯದ ನಂತರ ಜಾರಿಗೆ ಬಂದ ಸಂವಿಧಾನಕ್ಕೆ ೧೯೯೩ ರಲ್ಲಿ ಅನುಮೋದಿಸಿದ ೭೩ ಮತ್ತು ೭೪ ತಿದ್ದುಪಡಿಗಳಿಂದ ಭಾರತದ ರಾಜಕೀಯ ವ್ಯವಸ್ಥೆ ಈಗ ಮೂರು ಹಂತಗಳದ್ದಾಗಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಜೊತೆಗೆ ಜಿಲ್ಲೆ ಮತ್ತು ಕೆಳಗಿನ ಹಂತಗಳಲ್ಲಿ ಸಾಕಷ್ಟು ಸ್ವಾಯತ್ತತೆ ಹೊಂದಿರುವ ಸ್ಥಳೀಯ ಸರ್ಕಾರಗಳಿಗೆ ಈಗ ಸಂವಿಧಾನದ ಮಾನ್ಯತೆ ಇದೆ. ಈ ದಿಕ್ಕಿನಲ್ಲಿ ಕಳೆದ ದಶಕದಲ್ಲೇ ದೊಡ್ಡ ಹೆಜ್ಜೆ ಇಟ್ಟ ಹೆಗ್ಗಳಿಕೆ ಕರ್ನಾಟಕದ್ದು. ೧೯೮೩ ರಲ್ಲಿ ಜಾರಿಗೆ ಬಂದ ಜಿಲ್ಲಾಪರಿಷತ್ತು, ಮಂಡಲ ಪಂಚಾಯಿತಿ ಇತ್ಯಾದಿಗಳ ಶಾಸನ ಭಾರತ ದೇಶಕ್ಕೇ ಒಂದು ಮಾದರಿಯಾಗಿತ್ತು. ೧೯೮೭ ರಲ್ಲಿ ನಡೆದ ಚುನಾವಣೆಗಳಲ್ಲಿ ಅಧಿಕಾರಕ್ಕೆ ಬಂದ ಜಿಲ್ಲಾ ಪರಿಷತ್ತು ಮತ್ತು ಮಂಡಲ

ಪಂಚಾಯಿತಿಗಳು ರಾಜ್ಯದ ಆಡಳಿತ ವಿಕೇಂದ್ರೀಕರಣದಿಂದ ಉತ್ತಮಗೊಳ್ಳುವುದೆಂದು ತೋರಿಸಿಕೊಟ್ಟವು. ಅವುಗಳಿಂದ ಪ್ರಜಾಪ್ರಭುತ್ವಕ್ಕೂ ಒಂದು ಹೊಸ ಶಕ್ತಿ ಬಂದಂತೆ ತೋರಿತು. ಆದರೆ ರಾಜಕೀಯ ಪಕ್ಷಗಳ ಗುದ್ದಾಟದಲ್ಲಿ ವಿಕೇಂದ್ರೀಕರಣದ ಸಸಿ ಬೆಳೆಯಲು ಸಾಧ್ಯವಾಗಲಿಲ್ಲ. ೧೯೮೯ ರ ಕೊನೆಯಲ್ಲಿ ಅಧಿಕಾರಕ್ಕೆ ಬಂದ ಕಾಂಗ್ರೆಸ್ (ಐ) ಸರ್ಕಾರ ೧೯೮೩ರ ಮಸೂದೆಯನ್ನು ಬುಡಮೇಲು ಮಾಡಿ, ವಿಕೇಂದ್ರೀಕರಣದ ಹೆಸರಿನಲ್ಲಿ ಜಿಲ್ಲೆ ಮತ್ತು ಕೆಳಗಿನ ಮಟ್ಟಗಳಲ್ಲಿ ಅಧಿಕಾರಿಶಾಹಿಯನ್ನು ಭದ್ರ ಮಾಡಿತು. ೧೯೮೩ರಲ್ಲಿ ಜಾರಿಗೆ ಬಂದ ಕರ್ನಾಟಕ ಪಂಚಾಯತ ಶಾಸನದ ಪ್ರಕಾರ ಜಿಲ್ಲಾ, ತಾಲ್ಲೂಕು ಮತ್ತು ಗ್ರಾಮ ಪಂಚಾಯಿತಿಗಳು ಡೆಪ್ಯುಟಿ ಕಮೀಷನರುಗಳ ಸಲಹೆ ಸಮಿತಿಗಳಾಗಿವೆಯೇ ಹೊರತು ಸ್ವತಂತ್ರ ಅಧಿಕಾರವಿರುವ ಸಂಸ್ಥೆಗಳಾಗಿಲ್ಲ. ಪಂಚಾಯತ ರಾಜ್ಯಗಳಿಗೆ ೧೯೯೨ ರಲ್ಲಿ ಆಗಬೇಕಾಗಿದ್ದ ಚುನಾವಣೆಗಳು ಕೂಡ ಸರ್ವೋಚ್ಚ ನ್ಯಾಯಾಲಯವು ವಿಧಿಸಿದ ಕಾಲಮಿತಿಗಳನ್ನು ಉಲ್ಲಂಘಿಸಿ ಮುಂಚೆ ತಳ್ಳಲ್ಪಟ್ಟಿದ್ದವು. ಈಚೆಗೆ ನಡೆದ ಚುನಾವಣೆಯಲ್ಲಿ ಜನತಾದಳ ಪಕ್ಷ ಅಧಿಕಾರಕ್ಕೆ ಬಂದ ಮೇಲೆ ಜಿಲ್ಲಾ ಮತ್ತು ತಾಲ್ಲೂಕು ಪಂಚಾಯಿತಿಗಳಿಗೆ ಚುನಾವಣೆ ನಡೆದು, ಈಗೀಗ ಹೊಸ ಸದಸ್ಯರು, ಚುನಾಯಿತ ಅಧ್ಯಕ್ಷರುಗಳು ಅಧಿಕಾರಕ್ಕೆ ಬಂದಿದ್ದಾರೆ. ಆದರೆ ೧೯೮೩ ರ ಶಾಸನ ಬದಲಾಯಿಸುವವರೆಗೆ ರಾಜಕೀಯ ವಿಕೇಂದ್ರೀಕರಣ ಸಕ್ರಿಯವಾಗುವುದಿಲ್ಲ.

ಜನತಾದಳ ಸರಕಾರ ಶೀಘ್ರದಲ್ಲಿ ಹೊಸ ಕಾನೂನನ್ನು ಜಾರಿಗೆ ತರುವ ಭರವಸೆ ನೀಡಿದೆ. ಸಂವಿಧಾನದ ೭೩ನೇ ತಿದ್ದುಪಡಿಯ ಪ್ರಕಾರ ಪಂಚಾಯತ ರಾಜ್ಯಗಳಿಗೆ ವರ್ಗಾಯಿಸಬೇಕಾದ ಅಧಿಕಾರ, ಸಂಪನ್ಮೂಲಗಳ ಪರಿಮಿತಿಗಳನ್ನು ನಿರ್ಣಯಿಸುವ ಜವಾಬ್ದಾರಿ ಪ್ರತಿ ರಾಜ್ಯದ ವಿಧಾನಸಭೆ, ಪರಿಷತ್ತುಗಳಿಗೆ ಸೇರಿದ್ದು. ತಿದ್ದುಪಡಿಯು ವಿಧಿಸಿರುವ ಗುರಿ ಪಂಚಾಯತ ಸಂಸ್ಥೆಗಳು ಆರ್ಥಿಕ ವಿಕಾಸದ ಜೊತೆ ಇತರ ಕ್ಷೇತ್ರಗಳಲ್ಲೂ ಸ್ವತಂತ್ರ ಅಧಿಕಾರ ಹೊಂದಿರಬೇಕೆಂದು. ಅಂದರೆ ಆ ರಾಜ್ಯಗಳಿಗೆ ಕೊಡಬೇಕಾದ ಸ್ವಾಯತ್ತತೆ, ಅಧಿಕಾರಗಳನ್ನು ಕೊಟ್ಟಮೇಲೆ ಜಿಲ್ಲೆಯ ಮಟ್ಟದಿಂದ ಕೆಳಗೆ ಕರ್ನಾಟಕ ರಾಜ್ಯದ ಹತೋಟಿಯಲ್ಲಿರುವ ಅಧಿಕಾರಿಗಳ ಅವಶ್ಯಕತೆ ಇರುವುದಿಲ್ಲ. ಭೂವ್ಯವಸ್ಥೆ, ಕಂದಾಯ, ಕೈಗಾರಿಕೆಗಳು, ವಿದ್ಯಾಭ್ಯಾಸ ಮತ್ತು ಆರೋಗ್ಯ ಇತ್ಯಾದಿ ಇಲಾಖೆಗಳಲ್ಲದೆ ಈಗ ಕರ್ನಾಟಕದ ರಾಜ್ಯದ ಪರವಾಗಿ ಜಿಲ್ಲಾಧಿಕಾರಿಗಳು ನಡೆಸುತ್ತಿರುವ ಅಧಿಕಾರಗಳನ್ನೆಲ್ಲಾ ಜಿಲ್ಲೆಯ ಪಂಚಾಯತಿಯ ಚುನಾಯಿತ ಅಧಿಕಾರಿಗಳಿಗೆ ವಹಿಸಬೇಕಾಗುತ್ತದೆ. ಸ್ವಇಚ್ಛೆಯಿಂದ ತಮ್ಮ ಅಧಿಕಾರವನ್ನು ರಾಜ್ಯ ಸರ್ಕಾರದ ಮಂತ್ರಿಮಂಡಲ, ವಿಧಾನಸಭೆಯ ಸದಸ್ಯರು ಮತ್ತು ಅಧಿಕಾರಿಗಳು ಈ ರೀತಿ ವರ್ಗಾಯಿಸಲು ಒಪ್ಪುವರೆ? ಇಲ್ಲದಿದ್ದರೆ ಅವರು ವಿಕೇಂದ್ರೀಕರಣವನ್ನು

ಅನಿವಾರ್ಯವೆಂದು ಒಪ್ಪಿಕೊಳ್ಳುವಂತೆ ಒತ್ತಾಯಿಸುವ ಸಾಮಾಜಿಕ ಅಥವಾ ರಾಜಕೀಯ ಶಕ್ತಿಗಳು ಬೆಳೆಯುತ್ತಿವೆಯೆ?

ಈ ಪ್ರಶ್ನೆಗಳಿಗೆ ಸುಲಭ ಉತ್ತರ ಸಿಗುವುದಿಲ್ಲ. ರಾಷ್ಟ್ರದ ಐಕ್ಯತೆಯನ್ನು ಕಾಪಾಡುವ ಹೆಸರಿನಲ್ಲಿ ಸಂವಿಧಾನದಲ್ಲೇ ಕೇಂದ್ರ ಸರ್ಕಾರಕ್ಕೆ ರಾಜ್ಯ ಸರ್ಕಾರಗಳನ್ನು ಹತೋಟಿಯಲ್ಲಿಡುವ ಅಧಿಕಾರ ಅಡಕವಾಗಿದೆ. ಸಂದರ್ಭಾನುಸಾರ ಆ ಅಧಿಕಾರವನ್ನು ಕೇಂದ್ರ ಸರ್ಕಾರ ತನ್ನ ಅನುಕೂಲಕ್ಕೆ ಉಪಯೋಗಿಸಿಕೊಂಡು ರಾಜ್ಯ ಸರ್ಕಾರಗಳಿಗಿರುವ ಅಧಿಕಾರ ಸಂಪನ್ಮೂಲಗಳನ್ನು ಬಹಳವಾಗಿ ಮೊಟಕುಗೊಳಿಸಿದೆ. ಕೇವಲ ರಾಜಕೀಯ ಕಾರಣಗಳಿಗೆ ಅನೇಕ ರಾಜ್ಯ ಸರ್ಕಾರಗಳನ್ನು ವಜಾ ಮಾಡಿ, ರಾಜ್ಯಪಾಲರ ಮೂಲಕ ತಾನೇ ಅಧಿಕಾರ ವಹಿಸಿಕೊಂಡಿದೆ. ಅದೇ ರೀತಿ ರಾಜ್ಯ ಸರ್ಕಾರಗಳು ಕೆಳಮಟ್ಟದ ಸ್ಥಳೀಯ ಸರ್ಕಾರಗಳನ್ನು (Local Government) ಪದಚ್ಯುತಿಗೊಳಿಸಿವೆ. ಒಟ್ಟಿನಲ್ಲಿ ಭಾರತ ಮತ್ತು ರಾಜ್ಯ ಸರ್ಕಾರಗಳಲ್ಲಿ ಅಧಿಕಾರವನ್ನು ಇನ್ನಷ್ಟು ಕೇಂದ್ರೀಕರಿಸುವ ಮನೋಭಾವವಿದೆಯೇ ಹೊರತು ವಿಕೇಂದ್ರೀಕರಣವನ್ನು ಪ್ರೋತ್ಸಾಹಿಸುವ ಮನೋಭಾವ ಕಂಡು ಬರುವುದಿಲ್ಲ.

ಕಳೆದ ದಶಕಗಳಲ್ಲಿ ಕೇಂದ್ರ ಸರ್ಕಾರದ ಅಧಿಕಾರ ಬೆಳೆಯಲು ಅನೇಕ ಕಾರಣಗಳಿದ್ದವು. ಅವು ಈಗಲೂ ಕಡಿಮೆಯಾಗಿಲ್ಲ. ರಾಷ್ಟ್ರದ ಐಕ್ಯತೆಯನ್ನು ಕಾಪಾಡಲು ಬಲವಾದ ಕೇಂದ್ರ ಸರ್ಕಾರವಿರಬೇಕೆಂಬ ಹಂಬಲ ಒಂದಾದರೆ, ಪಂಚವಾರ್ಷಿಕ ಯೋಜನೆಗಳ ಒತ್ತಡ ಇನ್ನೊಂದು. ಈ ಎರಡು ಆಶಯಗಳ ಪೂರೈಕೆಯ ಹೆಸರಿನಲ್ಲಿ ಬೃಹದಾಕಾರವಾಗಿ ಬೆಳೆದಿರುವ ಕೇಂದ್ರ ಸರ್ಕಾರದ ಅಧಿಕಾರ ವರ್ಗ ಮತ್ತು ಸಂಪನ್ಮೂಲಗಳ ಕ್ರೋಢೀಕರಣ ಮೂರನೆಯ ಒತ್ತಡ. ಇವೆಲ್ಲದರ ಜೊತೆಗೆ ೧೯೭೭ರ ತರುವಾಯ ಬದಲಾದ ರಾಜಕೀಯ ಕ್ಷೇತ್ರದಲ್ಲಿ ಬೆಳೆದು ಬಂದ ಸರ್ವಾಧಿಕಾರದ ಪರಿಣಾಮವಾಗಿ ರಾಜ್ಯ ಸರ್ಕಾರಗಳ ಶಕ್ತಿ, ಸಂಪನ್ಮೂಲಗಳು ಕ್ಷೀಣವಾದವು. ಈ ಹಿನ್ನೆಲೆಯಲ್ಲಿ ತಮ್ಮಲ್ಲಿ ಉಳಿದಿರುವ ಅಲ್ಪಸ್ವಲ್ಪ ಅಧಿಕಾರವನ್ನು ಪಂಚಾಯತ ರಾಜ್ಯಗಳಿಗೆ ವರ್ಗಾಯಿಸುವುದಕ್ಕೆ ಯಾವ ರೀತಿಯ ಬೆಂಬಲವನ್ನು ಕೊಡಲಿಲ್ಲ. ೧೯೫೦ರ ದಶಕದಲ್ಲಿ ಅಧಿಕಾರಕ್ಕೆ ಬಂದ ಪಂಚಾಯತ ರಾಜ್ಯಗಳು ೧೯೬೦ರ ದಶಕದಲ್ಲಿ ಪದಚ್ಯುತಿ ಹೊಂದುವಂತಾಯಿತು.

ಬರುವ ದಶಕದಲ್ಲಿ ಈ ಕಾರಣಗಳು ಶಕ್ತಿಹೀನವಾಗುವ ಸೂಚನೆಗಳೇನಾದರೂ ಇವೆಯೆ? ಇದುವರೆಗೆ ಕೇಂದ್ರ ಸರ್ಕಾರದ ಶಕ್ತಿ ಹೆಚ್ಚಾಗಲು ಅನೇಕ ರಾಜ್ಯಗಳಲ್ಲೂ ಕೇಂದ್ರದಂತೆ ಕಾಂಗ್ರೆಸ್ (ಐ) ಪಕ್ಷದ ಸರ್ಕಾರಗಳಿದ್ದುದು ಸಹಾಯವಾಗಿತ್ತು. ಈಗ ಆ ಪರಿಸ್ಥಿತಿ ಬದಲಾಯಿಸಿದೆ. ಬಹಳ ರಾಜ್ಯಗಳಲ್ಲಿರುವ ಸರ್ಕಾರಗಳು ಇತರ ಪಕ್ಷಗಳಿಗೆ

ಸೇರಿರುವುವು. ಅಲ್ಲದೆ ಬರುವ ಲೋಕಸಭೆಯ ಚುನಾವಣೆಯಲ್ಲಿ ಯಾವುದಾದರೂ ಒಂದು ಪಕ್ಷ ನಿರ್ದಿಷ್ಟ ಬಹುಮತ ಪಡೆಯುವಂತೆ ಕಾಣುವುದಿಲ್ಲ. ಕೇಂದ್ರದಲ್ಲಿ ಸಮ್ಮಿಶ್ರ ಸರ್ಕಾರ ಅಧಿಕಾರಕ್ಕೆ ಬಂದರೆ ಮೊದಲಿನಂತೆ ರಾಜ್ಯಗಳ ಮೇಲೆ ದಬ್ಬಾಳಿಕೆ ನಡೆಸಲು ಸಾಧ್ಯವಾಗುವುದಿಲ್ಲ. ರಾಷ್ಟ್ರದ ರಕ್ಷಣೆ, ಐಕ್ಯತೆಗಳನ್ನು ಕಾಪಾಡಿಕೊಂಡು ಬರುವ ಅಧಿಕಾರ ಕೇಂದ್ರ ಸರ್ಕಾರಕ್ಕಿದ್ದರೂ ಅವುಗಳ ಹೆಸರಿನಲ್ಲಿ ತುರ್ತು ಪರಿಸ್ಥಿತಿಯಂತಹ ಕಾರಣವನ್ನೊಡ್ಡಿ ಅಧಿಕವಾದ ಅಧಿಕಾರವಹಿಸಿ ಕೊಳ್ಳುವುದು ಅಸಂಭವನೀಯ.

ಜೊತೆಗೆ ಈ ಮೊದಲೇ ತಿಳಿಸಿರುವಂತೆ ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿಗಳ ಪರಿಣಾಮವಾಗಿ ಈಗ ಎಲ್ಲಾ ರಾಜ್ಯ ಸರ್ಕಾರಗಳೂ ಐದು ವರ್ಷಗಳಿಗೊಮ್ಮೆ ಚುನಾವಣೆ ನಡೆಸಿ ಪಂಚಾಯತ ರಾಜ್ಯಗಳಿಗೆ ಚುನಾಯಿತ ಅಧ್ಯಕ್ಷರು, ಪ್ರಧಾನರಿಗೆ ಅಧಿಕಾರವಹಿಸಬೇಕು. ಈವರೆಗಿನಂತೆ ಅನಿರ್ದಿಷ್ಟ ಕಾಲ ಚುನಾವಣೆಯನ್ನು ಮುಂದೂಡುವಂತಿಲ್ಲ. ಒಂದರ ಮೇಲೊಂದು ಚುನಾವಣೆ ನಡೆದುಕೊಂಡು ಬರುತ್ತಿದ್ದರೆ ವಿಕೇಂದ್ರೀಕರಣದಲ್ಲಿ ಜನರ ನಂಬುಗೆ ವಿಶ್ವಾಸಗಳು ಬೆಳೆದುಬರುವುದರಲ್ಲಿ ಸಂಶಯವಿಲ್ಲ. ಸಂವಿಧಾನದ ತಿದ್ದುಪಡಿಗಳಲ್ಲಿ ಪರಿಶಿಷ್ಟವರ್ಗದವರಿಗೆ ಮತ್ತು ಮಹಿಳೆಯರಿಗೆ ಮೀಸಲಾತಿ ಇದೆ. ಇವರುಗಳಿಗೆ ಚುನಾಯಿತ ಅಧಿಕಾರಸ್ಥಾನದಲ್ಲಿ ಸಾಕಷ್ಟು ಪ್ರಾತಿನಿಧ್ಯ ಕೊಡಬೇಕಾದ ಒತ್ತಡ ಇರುವುದರಿಂದ ಕ್ರಮೇಣ ಕೆಳಮಟ್ಟದ ಸರ್ಕಾರಗಳ ಜವಾಬ್ದಾರಿ, ಅಧಿಕಾರಗಳನ್ನು ಹೆಚ್ಚಿಸುವುದರಲ್ಲಿ ಜನತೆಯ ಪ್ರಭಾವೂ ಹೆಚ್ಚುವ ನಂಬಿಕೆಯಿದೆ. ಆರ್ಥಿಕ ಪ್ರಗತಿ, ವಿದ್ಯಾಭ್ಯಾಸ ಮತ್ತು ಆರೋಗ್ಯ ರಕ್ಷಣೆಯ ಅನುಕೂಲಗಳು ಹೆಚ್ಚಿದಂತೆ ಗ್ರಾಮ ಮತ್ತು ಜಿಲ್ಲೆಯ ಮಟ್ಟಗಳಲ್ಲಿ ಪ್ರಜಾತಂತ್ರ ಶಕ್ತಿಗೊಳ್ಳುವುದರಲ್ಲಿ ಅನುಮಾನವಿಲ್ಲ. ಆದರೆ ಇವೆಲ್ಲಾ ಕೆಲವು ವರ್ಷಗಳಲ್ಲಾಗಲಿ, ಒಂದೇ ಒಂದು ದಶಕದಲ್ಲಾಗಲಿ ವಿಕಾಸಗೊಳ್ಳುವುದು ಕಷ್ಟ. ಮುಂದಿನ ಶತಕದ ಮೊದಲ ಭಾಗದಲ್ಲಿ ಜನಸಾಮಾನ್ಯರಿಗೆ ತಮ್ಮ ಶಕ್ತಿಯ ಅರಿವು ಬಲವಾದಂತೆ ನಿಜವಾದ ವಿಕೇಂದ್ರೀಕರಣವನ್ನು ತಡೆಯಲು ರಾಜ್ಯ ಅಥವಾ ಕೇಂದ್ರ ಸರ್ಕಾರಗಳಿಗೆ ಕಷ್ಟಸಾಧ್ಯ.

ಕಡೆಯದಾಗಿ ರಾಜಕೀಯ ಕ್ಷೇತ್ರದಲ್ಲಿ ಕರ್ನಾಟಕಕ್ಕೆ ಸೀಮಿತವಾಗಿರುವ ಕೆಲವು ಅಂಶಗಳನ್ನು ಗುರುತಿಸಬಹುದು. ಪ್ರಜಾಪ್ರಭುತ್ವದ ಪ್ರಾರಂಭದಿಂದ ೧೯೮೩ರ ವರೆಗೆ ತಡೆಯಿಲ್ಲದೆ ರಾಜ್ಯದ ಚುಕ್ಕಾಣಿ ಹಿಡಿದಿದ್ದ ಕಾಂಗ್ರೆಸ್ ಪಕ್ಷ ಈಗ ಅನೇಕ ಕಾರಣಗಳಿಂದ ಅಧಿಕಾರ ಕಳೆದುಕೊಂಡಿದೆ. ಇತ್ತೀಚಿಗೆ ನಡೆದ ಚುನಾವಣೆಯಲ್ಲಿ ಬಹುಮತ ಗಳಿಸಿ ಜನತಾದಳ ಅಧಿಕಾರಕ್ಕೆ ಬಂದಿದ್ದರೂ ರಾಜ್ಯದ ಜನತೆ ಎದುರಿಸುತ್ತಿರುವ ಅನೇಕ ಸಮಸ್ಯೆಗಳನ್ನು ಬಗೆಹರಿಸುವ ಸಾಮರ್ಥ್ಯ ಅದಕ್ಕಿದೆಯೇ ಎಂಬ ಶಂಕೆ ಉಳಿದಿದೆ. ಇದಕ್ಕೆ ಪಕ್ಷದಲ್ಲಿರುವ ವಿವಿಧ ಅಭಿಪ್ರಾಯಗಳು, ಸೆಳೆತಗಳು ಕಾರಣವಾಗಿದ್ದರೂ ಇರಬಹುದು.

ಅದಕ್ಕಿಂತ ಹೆಚ್ಚಾಗಿ ಹಿಂದಿನ ರಾಜ್ಯಭಾರಗಳು ಎದುರಿಸದ ಸಮಸ್ಯೆಗಳನ್ನೆಲ್ಲಾ ತ್ವರಿತವಾಗಿ ಬಗೆಹರಿಸುತ್ತೇವೆಂದು ಕೊಟ್ಟ ಆಶ್ವಾಸನೆಗಳನ್ನು ಈಗ ಜನತಾದಳ ಸರ್ಕಾರ ಎದುರಿಸುತ್ತಿದೆ. ಆಡಳಿತ ಕ್ಷೇತ್ರದ ಸಮಸ್ಯೆಗಳು ಬಹಳ ಗುರುತರವಾದುದರಿಂದ ಅವನ್ನು ನಿವಾರಿಸಲು ಈ ಸರ್ಕಾರಕ್ಕೆ ಇನ್ನು ಕಾಲಾವಕಾಶ ಬೇಕಾಗಬಹುದು. ಆದರೆ ಪಟ್ಟಭದ್ರ ಹಿತಾಸಕ್ತಿ ಅಥವಾ ಅಧಿಕಾರವರ್ಗದ ಬೆದರಿಕೆಗಳಿಗೆ ಮಂತ್ರಿಮಂಡಲ ಮಣಿಯದೆ ಮಾಡಬೇಕಾದ ಕೆಲಸಗಳನ್ನು ದೃಢಮನಸ್ಸಿನಿಂದ ನಡೆಸುವವರೆಗೆ ಜನತೆಯ ಆಶಯಗಳ ಪೂರೈಕೆ ಸಾಧ್ಯವಾಗುವುದಿಲ್ಲ. ಈ ಸಂಕಟದಲ್ಲಿ ಪಂಚಾಯತ ರಾಜ್ಯಗಳಿಗೆ ಹೆಚ್ಚು ಅಧಿಕಾರಕೊಟ್ಟು, ಜನರ ದಿನ ಸಾಮಾನ್ಯದ ಅನುಕೂಲತೆಗಳನ್ನು ಕಲ್ಪಿಸುವ ಜವಾಬ್ದಾರಿಯನ್ನು ಪೂರ್ಣವಾಗಿ ವಹಿಸಿದರೆ ರಾಜ್ಯ ಸರ್ಕಾರದ ಮೇಲೆ ಹಿತಾಸಕ್ತಿಗಳ ಒತ್ತಡ ತಾನೇ ತಾನಾಗಿ ಕಡಿಮೆಯಾದೀತು.

೨

ಮುಂದಿನ ದಶಕದಲ್ಲಿನ ರಾಜಕೀಯ ಸ್ವರೂಪ ಆರ್ಥಿಕ ವ್ಯವಸ್ಥೆಯ ಬದಲಾವಣೆಗಳನ್ನು ಅವಲಂಬಿಸಿರುತ್ತದೆ. ಈ ಬದಲಾವಣೆಗಳಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಲ್ಲದೆ ರಾಜ್ಯ ಮತ್ತು ಪಂಚಾಯತ ಸರಕಾರ ಸಂಬಂಧಗಳಲ್ಲಿ ಆಗಬಹುದಾದ ವ್ಯತ್ಯಾಸಗಳನ್ನೂ ಗಮನಿಸಬೇಕು. ೧೯೯೧ ರಿಂದೀಚೆಗೆ ಭಾರತದ ಆರ್ಥಿಕ ನೀತಿಯಲ್ಲಿ ಆಗಿರುವ ಮಾರ್ಪಾಟು ಮಹತ್ತರವಾದುದು. ಕಳೆದ ದಶಕದವರೆಗೂ ನಡೆದು ಬಂದಿದ್ದ ಯೋಜನಾ ಪದ್ಧತಿಯ ಬದಲಾಗಿ ಭಾರತ ಸರಕಾರ ಉದಾರೀಕರಣ, ಜಾಗತೀಕರಣ ಮತ್ತು ಖಾಸಗೀಕರಣಗಳನ್ನು ಅನುಸರಿಸುತ್ತಿದೆ. ಆರ್ಥಿಕ ವಿಕಾಸದಲ್ಲಿ ಸರಕಾರ ಮುಂದಾಳತ್ವ ಹೊಂದಿರಬೇಕೆಂಬ ತತ್ವವನ್ನು ಬಿಟ್ಟು ರಾಷ್ಟ್ರೀಯ ಸಂಪನ್ಮೂಲಗಳ ವಿತರಣೆ ಉಪಯೋಗಗಳು ಮಾರುಕಟ್ಟೆ ನೀತಿಯಿಂದ ಉದ್ಭವಿಸುವ ಗ್ರಾಹಕರ ಬೇಡಿಕೆಗಳನ್ನು ಪೂರೈಸುವುದರಲ್ಲಿ ತೊಡಗಿವೆ. ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳಿಗೆ ಒದಗಿ ಬರುವ ಸಂಪನ್ಮೂಲಗಳ ವೆಚ್ಚದಲ್ಲಿ ಹಿಂದಿನಂತೆ ಸಮಾಜ ಕಲ್ಯಾಣ ಕಾರ್ಯಕ್ರಮಗಳಿಗೆ ಸಾಕಷ್ಟು ಪ್ರಮಾಣದ ನೆರವು ಸಿಕ್ಕುತ್ತಿಲ್ಲ. ವಿದ್ಯಾಭ್ಯಾಸ, ಆರೋಗ್ಯ ರಕ್ಷಣೆ, ವಸತಿ ನಿರ್ಮಾಣ, ಕುಡಿಯುವ ನೀರಿನ ಪೂರೈಕೆ, ನೀರಾವರಿ ಮತ್ತು ವಿದ್ಯುಚ್ಛಕ್ತಿಗಳು ಸರಕಾರದ ವೆಚ್ಚದ ಕಡಿಮೆಯಿಂದಾಗಿ ಗ್ರಾಮೀಣ ಪ್ರದೇಶಗಳಲ್ಲಿ ಮತ್ತು ಬಡವರಿಗೆ ದೊರಕದಂತಾಗುತ್ತಿವೆ.

ಈ ಕ್ಷೇತ್ರಗಳಿಗೆಲ್ಲಾ ಖಾಸಗೀ ಉದ್ಯಮಿಗಳು, ಬಂಡವಾಳಗಾರರನ್ನು ಆಕರ್ಷಿಸಿ ಅವುಗಳ ಸರಬರಾಜನ್ನು ವೃದ್ಧಿಪಡಿಸಲು ಸಾಧ್ಯವೆಂದು ಭಾರತ ಸರಕಾರದ ಅಭಿಪ್ರಾಯ. ಅದೇ ಭಾವನೆ ಕರ್ನಾಟಕ ಸೇರಿ ಅನೇಕ ರಾಜ್ಯ ಸರ್ಕಾರಗಳಿಗೂ ಇದೆ. ಇದಕ್ಕೆ

ಅನುಸಾರವಾಗಿ ಈವರೆಗೆಯಂತೆ ಕರ್ನಾಟಕದಲ್ಲಿ ಸರ್ಕಾರಿ ಶಾಲೆ, ಆಸ್ಪತ್ರೆಗಳ ಹಣದ ಅಭಾವ, ಪರಿಣಿತ ಶಿಕ್ಷಕರ ಕೊರತೆ, ಮೇಲಾಧಿಕಾರಿಗಳ ನಿರಾಸಕ್ತಿ, ಇತ್ಯಾದಿಗಳು ಮುಂದುವರೆದು ಖಾಸಗಿ ಶಾಲೆಗಳು ಮತ್ತು ಆಸ್ಪತ್ರೆಗಳು ಸೊಂಪಾಗಿ ಬೆಳೆದಿವೆ. ಈ ಸೇವೆಗಳೆಲ್ಲಾ ಪಟ್ಟಣಗಳಲ್ಲಿ, ದೊಡ್ಡ ಊರುಗಳಲ್ಲಿ ಕೇಂದ್ರೀಕೃತವಾಗಿ, ಗ್ರಾಮೀಣ ಪ್ರದೇಶಗಳಲ್ಲಿ ಅವುಗಳ ಅಭಾವ ಹೆಚ್ಚುವುದು ಖಚಿತ. ಇದನ್ನು ನಿವಾರಿಸುವುದರಲ್ಲಿ ಪಂಚಾಯತ ರಾಜ್ಯ ವ್ಯವಸ್ಥೆ ಅನುಕೂಲವಾಗುವುದೆಂಬ ಅಭಿಪ್ರಾಯ ಅನೇಕರಲ್ಲಿದೆ. ಜಿಲ್ಲೆಯ ಮಟ್ಟದಿಂದ ಕೆಳಗಿನ ಸ್ಥಳೀಯ ರಾಜ್ಯಗಳಿಗೆ ಸ್ಕೂಲು, ಆಸ್ಪತ್ರೆ, ಕುಡಿಯುವ ನೀರಿನ ವ್ಯವಸ್ಥೆ, ಸಣ್ಣ ನೀರಾವರಿಗಳು, ಆರೋಗ್ಯ ರಕ್ಷಣೆ ಮುಂತಾದ ಕಾರ್ಯಕ್ರಮಗಳ ಸಂಪೂರ್ಣ ಜವಾಬ್ದಾರಿವಹಿಸಿ ಸಂಪನ್ಮೂಲಗಳ ವಿತರಣೆಯ ಹೊಣೆಯನ್ನೂ ಅವರಿಗೆ ಬಿಟ್ಟರೆ ಪ್ರತಿ ಗ್ರಾಮದ ಜನರ ಅವಶ್ಯಕತೆ, ಆದ್ಯತೆಗಳಿಗನುಸಾರವಾಗಿ ಈ ಸೌಕರ್ಯಗಳು ಬೆಳವಣಿಗೆಯಾಗುವ ಸಂಭವ ಹೆಚ್ಚೆಂದು ಅವರ ವಾದ.

ಪಂಚಾಯತ ರಾಜ್ಯಗಳು ಅಧಿಕಾರಕ್ಕೆ ಬಂದು ಕೆಲವು ವರ್ಷ ಸ್ವಾಯತ್ತತೆಯಿಂದ ಆಡಳಿತ ನಡೆಸುವವರೆಗೆ ಈ ವಾದ ಸರಿಯೋ ಅಲ್ಲವೋ ಎಂದು ಹೇಳಲಾಗುವುದಿಲ್ಲ. ಅವುಗಳ ದಕ್ಷತೆ, ಪ್ರಾಮಾಣಿಕತೆಗಳಲ್ಲದೆ ಗ್ರಾಮೀಣ ಸಮಾಜಗಳಲ್ಲಿ ಈ ಮಧ್ಯೆ ಉದಾರೀಕರಣ ಮತ್ತು ಮಾರುಕಟ್ಟೆಯ ವಿಸ್ತರಣೆಗಳಿಂದ ಉಂಟಾಗಬಹುದಾದ ಬದಲಾವಣೆಗಳನ್ನು ಗಣನೆಯಲ್ಲಿಟ್ಟಿರಬೇಕು. ಮಾರುಕಟ್ಟೆಯ ವ್ಯವಹಾರಗಳಲ್ಲಿ ತೊಡಗಿರುವ ವ್ಯಕ್ತಿ - ಸಂಸ್ಥೆಗಳ ಮನೋಭಾವ ತಮ್ಮ ಉದ್ಯಮದಿಂದ ದೊರಕುವ ಪ್ರತಿಫಲವನ್ನು ತಾವು ಅನುಭವಿಸಬೇಕೆಂಬುದೇ ಹೊರತು ಇತರರೊಡನೆ ಹಂಚಿಕೊಳ್ಳಬೇಕೆಂದಲ್ಲ. ಇದಕ್ಕೆ ಅನುಕೂಲವಾಗುವಂತೆ ತಾಂತ್ರಿಕ ವಿಜ್ಞಾನ ಮತ್ತು ಬಂಡವಾಳಗಳನ್ನೊದಗಿಸುವ ಬಹುರಾಷ್ಟ್ರೀಯ ಸಂಸ್ಥೆಗಳ ಜೊತೆ ಸೇರಿ ದೊಡ್ಡ ಪ್ರಮಾಣದ ಕಾರುಭಾರುಗಳನ್ನು ಸ್ಥಾಪಿಸುವುದರಲ್ಲಿ ದೇಶೀಯ ಸಂಸ್ಥೆಗಳಿಗೆ ಆಸಕ್ತಿ ಹೆಚ್ಚು. ತಮಗೆ ಬೇಕಾದ ಅನುಕೂಲಗಳನ್ನು ಸಂಪಾದಿಸುವುದಕ್ಕೆ ಈ ವಿಧದ ಸಂಸ್ಥೆಗಳು ರಾಷ್ಟ್ರ ಅಥವಾ ರಾಜ್ಯ ಸರ್ಕಾರಗಳೊಡನೆ ಸಂಬಂಧ ಬೆಳೆಸುತ್ತಾರೆಯೇ ಹೊರತು ಸಣ್ಣಪುಟ್ಟ ಸ್ಥಳೀಯ ಸರ್ಕಾರಗಳೊಡನೆ ಅಲ್ಲ. ಉದಾರೀಕರಣ ಸಿದ್ಧಾಂತ ಉದ್ಯೋಗ, ವ್ಯಾಪಾರ ಮೊದಲಾದ ವ್ಯವಹಾರಗಳಲ್ಲಿ ವಿಕೇಂದ್ರೀಕರಣವನ್ನು ಉಪದೇಶಿಸಿದರೂ ದೇಶದಾದ್ಯಂತ ಇರಬೇಕಾದ ಕಾನೂನು, ಆಡಳಿತ ಮುಂತಾದ ವ್ಯವಸ್ಥೆಗೆ ಕೇಂದ್ರೀಕೃತ ಅಧಿಕಾರವನ್ನು ಬೆಂಬಲಿಸುತ್ತದೆ. ಕಾರಣ ಸಂಪರ್ಕಿಸಬೇಕಾದ ಮಂತ್ರಿಗಳು, ಅಧಿಕಾರಿಗಳು, ಇತರ ಸರ್ಕಾರಿ ನೌಕರರ ಸಂಖ್ಯೆ ಮಿತಿಯಾಗಿರುತ್ತದೆ. ಅಲ್ಲದೆ ವ್ಯವಹಾರಗಳನ್ನು ಗೋಪ್ಯವಾಗಿ ಮತ್ತು ಶೀಘ್ರವಾಗಿ ನಡೆಸಿಕೊಂಡು ಹೋಗಬಹುದೆಂಬ

ಭರವಸೆ ಇರುತ್ತದೆ. ಹೀಗಾಗಿ ಉದಾರೀಕರಣ ಪ್ರೋತ್ಸಾಹಿಸುವ ಉದ್ಯಮಿಗಳು, ಬಂಡವಾಳಗಾರರು, ಸಗಟು ವ್ಯಾಪಾರಿಗಳು, ಗುತ್ತಿಗೆದಾರರಲ್ಲದೆ ವ್ಯವಸಾಯದಲ್ಲಿ ಹೊಸ ಬೆಳೆಗಳು, ತಳಿಗಳನ್ನು ಉಪಯೋಗಿಸುವ ಶಕ್ತಿಯಿರುವ ದೊಡ್ಡ ರೈತರು ಕೂಡ ಪಂಚಾಯತ ರಾಜ್ಯಗಳಿಗೆ ಅಷ್ಟೇನೂ ಬೆಂಬಲ ಕೊಡುವ ಸೂಚನೆಗಳಿಲ್ಲ.

ಒಟ್ಟಿನಲ್ಲಿ ಉದಾರೀಕರಣ ನೀತಿಯಿಂದ ರಾಜಕೀಯ ವಿಕೇಂದ್ರೀಕರಣಕ್ಕೆ ಸಹಾಯವಾದಿತೆಂಬ ನಂಬಿಕೆಯಲ್ಲಿ ಅಷ್ಟೇನೂ ತಿರುಳು ಕಾಣಿಸುವುದಿಲ್ಲ. ಗ್ರಾಮೀಣ ಉದ್ಯಮಗಳು, ವ್ಯವಸಾಯ, ಪ್ರಕೃತಿ ಸಂಪನ್ಮೂಲಗಳನ್ನು ಆಶ್ರಯಿಸಿರುವ ಇತರ ದಂಧೆಗಳ ಮೇಲೆಲ್ಲಾ ಮಹಾತ್ಮಾ ಗಾಂಧಿಯವರು ಚಿತ್ರಿಸಿರುವ 'ಗ್ರಾಮ ಸ್ವರಾಜ್ಯ'ಕ್ಕೆ ವ್ಯತಿರಿಕ್ತವಾದ ಶಕ್ತಿಗಳು ಬೆಳೆಯುತ್ತಿವೆ. ಈ ವಾತಾವರಣದಲ್ಲಿ ಪಂಚಾಯತ ರಾಜ್ಯಗಳು ಬಳಕೆಗೆ ಬಂದು ಸ್ಥಿರವಾಗಬೇಕಾದರೆ ಜನತೆಯಲ್ಲಿ ಪ್ರಜಾಪ್ರಭುತ್ವದಲ್ಲಿ ಅಪರಿಮಿತ ನಂಬಿಕೆಯಿರಬೇಕು, ಅದರ ಅಭಿವೃದ್ಧಿಗೆ ಹೋರಾಡುವ ಮನೋಭಾವವಿರಬೇಕು.

೩

ಪ್ರಜಾಸತ್ತೆಗೆ ಅವಶ್ಯವಾದ ಸಂಸ್ಥೆಗಳು ವ್ಯಕ್ತಿ ಸ್ವಾತಂತ್ರ್ಯವನ್ನಾಗಲಿ, ಸಮಾಜ ಕಲ್ಯಾಣವನ್ನಾಗಲಿ ಕಾಪಾಡಿಕೊಂಡು ಬರುವುದರಲ್ಲಿ ಯಶಸ್ವಿಗಳಾಗಿಲ್ಲ. ವ್ಯತಿರಿಕ್ತವಾಗಿ ಪ್ರಜಾಪ್ರಭುತ್ವದ ಶಾಸಕಾಂಗ, ರಾಜ್ಯಾಂಗ ಮತ್ತು ನ್ಯಾಯಾಂಗಗಳಲ್ಲಿದ್ದ ನಂಬಿಕೆಗಳು ನಶಿಸುವಂತಾಗಿದೆ. ಚುನಾಯಿತ ಪ್ರತಿನಿಧಿಗಳಾಗಲಿ, ನೇಮಿಸಲ್ಪಟ್ಟ ಅಧಿಕಾರಿಗಳಾಗಲಿ ತಾವು ಸಮಾಜಸೇವಕರೆಂದು ಭಾವಿಸಿಲ್ಲ. ಬ್ರಿಟಿಷರ ಕಾಲದಲ್ಲಿದ್ದಂತೆ ತಾವು ಆಳುವ ಹಕ್ಕುಳ್ಳವರು, ಇತರರು ತಮ್ಮ ಅಧೀನರೆಂಬಂತೆ ನಡೆದುಕೊಳ್ಳುತ್ತಿದ್ದಾರೆ. ಜಿಲ್ಲೆಯ ಮಟ್ಟದಿಂದ ಕೆಳಗಂತೂ ಜಿಲ್ಲಾಧಿಕಾರಿಗಳು ರಾಜಮಹಾರಾಜರುಗಳಂತೆ ವರ್ತಿಸುವುದು ರೂಢಿಯಾಗಿದೆ. ಎಲ್ಲಾ ಕ್ಷೇತ್ರಗಳಲ್ಲೂ, ಎಲ್ಲಾ ಹಂತಗಳಲ್ಲೂ ಲಂಚ, ರುಷುವತ್ತು, ಮೋಸ, ಅನ್ಯಾಯಗಳು ತಾವೇ ತಾವಾಗಿ ವಿಜೃಂಭಿಸಿ ಜನಗಳ ದೈನಂದಿನ ಜೀವನ ಕೂಡ ಕಷ್ಟವಾಗಿದೆ. ಈ ವಾತಾವರಣ ಬದಲಾಯಿಸಬೇಕಾದರೆ ನವದೆಹಲಿಯಿಂದ ಹಿಡಿದು ತಾಲ್ಲೂಕು ಮತ್ತು ಗ್ರಾಮಗಳವರೆಗೆ ಅಧಿಕಾರಿ-ಜನತೆಯ ಸಂಬಂಧದಲ್ಲಿ ಒಂದು ಕ್ರಾಂತಿಯೇ ಅವಶ್ಯಕ. ಯಾವ ಹಂತದ ಅಧಿಕಾರಿಯಾಗಲಿ, ಯಾವ ಪ್ರತಿನಿಧಿಯಾಗಲಿ ಬುಡಮಟ್ಟಿನ ಮತದಾರರಿಗೆ ಹೊಣೆ (accountable)ಆಗಿರಬೇಕೇ ಹೊರತು ಮೇಲಾಧಿಕಾರಿಗಾಗಲಿ, ಬೇರೆ ಸಂಸ್ಥೆ ಅಥವಾ ಪಕ್ಷಕ್ಕಾಗಲಿ ಅಲ್ಲ. ಹೀಗಾಗಬೇಕಾದರೆ ಮೊದಲೇ ತಿಳಿಸಿದಂತೆ ಪಂಚಾಯತ ರಾಜ್ಯಗಳಿಗೆ ನಿಜವಾದ ರಾಜಕೀಯ ಮತ್ತು ಆರ್ಥಿಕ ಶಕ್ತಿಗಳು ದೊರಕಬೇಕು. ಜೊತೆಗೆ ಅಖಿಲ ಭಾರತ ಸೇವೆಗಳು (all- India Services)

ಮತ್ತು ರಾಜ್ಯ ಸರ್ಕಾರಗಳ ಸೇವಕರು ಕಡಿಮೆಯಾಗಿ ಪಂಚಾಯತ ರಾಜ್ಯಗಳ ಅಧೀನದಲ್ಲಿರುವ ಅಧಿಕಾರಗಳು ಹೆಚ್ಚಾಗಬೇಕು. ಇಷ್ಟು ದೊಡ್ಡ ಬದಲಾವಣೆ ಆಗಬೇಕಾದರೆ ಗ್ರಾಮಮಟ್ಟದಲ್ಲಿ ಬಲವಾದ ಚಳುವಳಿ ಅವಶ್ಯ.

ಚುನಾಯಿತರಾಗಿ ಬರುವ ಪಂಚಾಯತ ಸದಸ್ಯರು, ಅಧ್ಯಕ್ಷರು ಮೊದಲಾದವರ ಮೇಲೆ ಮತದಾರರು ತಮ್ಮ ಶಕ್ತಿಯನ್ನು ಸತತವಾಗಿ ಪ್ರಯೋಗಿಸುವ ಉಪಾಯಗಳನ್ನು ಕಂಡುಕೊಂಡರೆ ರಾಜಕೀಯ ಸ್ವರೂಪದ ಬದಲಾವಣೆ ಗ್ರಾಮಗಳ ಹಂತದಿಂದ ಪ್ರಾರಂಭಿಸಿ ಕ್ರಮೇಣ ಕೇಂದ್ರ ಸರ್ಕಾರವನ್ನು ತಲುಪುವುದರಲ್ಲಿ ಅನುಮಾನವಿಲ್ಲ. ಅಂದರೆ ಫಲಪ್ರದವಾದ ಆಂದೋಳನ ರಾಜ್ಯಶಾಸನ, ಬುದ್ಧಿ ಜೀವಿಗಳ ಬರವಣಿಗೆಗಳಿಂದ ಮಾತ್ರ ಸಾಧ್ಯವಿಲ್ಲ. ಎಚ್ಚರಗೊಂಡ ಗ್ರಾಮೀಣ ಜನತೆಯ ಚಳುವಳಿಗೆ ಇವು ಸಹಾಯವಾಗಬಹುದು, ಅಷ್ಟೆ. ಗ್ರಾಮನಿವಾಸಿಗಳಲ್ಲಿ ರಾಜಕೀಯ ಚಟುವಟಿಕೆ ಈಗ ಕೆಲವು 'ಮುಖ್ಯ'ರಿಗೆ ಮಾತ್ರ ಸೀಮಿತವಾಗಿದೆ. ಇದರ ಬದಲಾಗಿ ಮತದ ಹಕ್ಕುಳ್ಳ ಪ್ರತಿವ್ಯಕ್ತಿಯೂ ತನ್ನ ಜಾತಿ ಅಲ್ಲದೆ ಆರ್ಥಿಕ ಮತ್ತು ಧಾರ್ಮಿಕ ಪಂಗಡವೇನಾದರೂ ಸಮಾಜದಲ್ಲಿ ಒಂದೇ ಸಮನಾದ ಶಕ್ತಿ, ಆಸಕ್ತಿ ಹೊಂದಿರುವಂತಾದರೆ ರಾಜಕೀಯ ಸ್ವರೂಪದ ಅರ್ಥಯುಕ್ತ ಬದಲಾವಣೆಗೆ ಅವಕಾಶವುಂಟಾಗುತ್ತದೆ. ಜನತೆಯಲ್ಲಿ ವಿದ್ಯಾಭ್ಯಾಸದ ಕೊರತೆ, ಸಂಪ್ರದಾಯದ ಸಂಕೋಲೆ, ಜಾತಿ ಪದ್ಧತಿಯ ನಿರ್ಬಂಧಗಳು ಮುಂತಾದುವನ್ನು ನಿವಾರಿಸುವುದರ ಜೊತೆ ಈಗಿರುವ ಬಡತನ, ನಿರುದ್ಯೋಗ ಮತ್ತು ಆರ್ಥಿಕ ಅಸಮಾನತೆಗಳನ್ನೂ ನಿವಾರಿಸಬೇಕು. ನಿಜಕ್ಕೂ ಇವು ಬೇರೆ ಬೇರೆ ಸಮಸ್ಯೆಗಳಲ್ಲ: ಪಟ್ಟಭದ್ರ ಹಿತಾಶಕ್ತಿಗಳು ತಮ್ಮ ಪ್ರಭಾವವನ್ನು ಬೆಳೆಸಿಕೊಂಡು ಬರಲು ಅನುಸರಿಸುತ್ತಿರುವ ಕಾರ್ಯವೈಖರಿಯ ನಾನಾ ಮುಖಗಳು. ಈ ಕಾರಣ ಮುಂದಿನ ದಶಕದಲ್ಲಿ ಜನಸಾಮಾನ್ಯರ ರಾಜಕೀಯ ಆಸಕ್ತಿಯಲ್ಲಿ ಎಷ್ಟು ಬದಲಾವಣೆ ಆಗಬೇಕೋ ಅಷ್ಟೇ ಬದಲಾವಣೆ ಅವರ ನಿತ್ಯ ಜೀವನದ ಮಟ್ಟದಲ್ಲಿ ಆಗಬೇಕಾಗಿದೆ. ಆದರೆ ಈಗ ಭಾರತ ಸರ್ಕಾರ ಮತ್ತು ಕರ್ನಾಟಕ ಸರ್ಕಾರಗಳು ಹಿಡಿದಿರುವ ಆರ್ಥಿಕ ನೀತಿಯಿಂದ ಗ್ರಾಮೀಣ ಜನತೆಯ ಜೀವನಮಟ್ಟ ಉತ್ತಮಗೊಳ್ಳುವುದೆಂಬ ಭರವಸೆ ಇಲ್ಲ.

೪

ಒಟ್ಟಿನಲ್ಲಿ ಸಂವಿಧಾನದ ತಿದ್ದುಪಡಿ ಮತ್ತು ರಾಜಕೀಯ ವಲಯದಲ್ಲಾಗುತ್ತಿರುವ ಇತರ ಬದಲಾವಣೆಗಳಿಂದ ಕರ್ನಾಟಕ ರಾಜಕೀಯ ರಥ ಮುಂದಿನ ದಶಕದಲ್ಲಿ ವಿಕೇಂದ್ರೀಕರಣದತ್ತ ಸಾಗಬಹುದೆಂಬ ಅನುಮಾನಕ್ಕೆ ಆಸ್ಪದವಿದೆ. ಆದರೆ ಈ ಪ್ರಗತಿಗೆ ಆರ್ಥಿಕ ಬೆಳವಣಿಗೆಗಳು ಪ್ರತಿರೋಧವಾಗುವ ಚಿಹ್ನೆಗಳೂ ಕಾಣುತ್ತವೆ. ಈ ಹಿನ್ನೆಲೆಯಲ್ಲಿ

ರಾಜಕೀಯ ಒಂದು ಖಚಿತವಾದ ರೂಪವನ್ನು ತಾಳಬೇಕಾದರೆ ಸಾರ್ವಜನಿಕವಾಗಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಲು ಬಲವಾದ ಆಸಕ್ತಿ ಮತ್ತು ಚಳುವಳಿ ಬೆಳೆಯಬೇಕು. ಈಚೆಗೆ ನಡೆದ ಪಂಚಾಯತ ಚುನಾವಣೆಗಳಲ್ಲಿ ಮೀಸಲಾತಿಯ ಕಾರಣದಿಂದಲ್ಲದೆ ಜನತೆಯ ಬೆಂಬಲದಿಂದ ಸ್ಥಳೀಯ ಸಂಸ್ಥೆಗಳ ಅಧ್ಯಕ್ಷ-ಉಪಾಧ್ಯಕ್ಷ ಸ್ಥಾನಗಳಿಗೆ ಬಂದಿರುವ ಮಹಿಳೆಯರು ಮತ್ತು ಪರಿಶಿಷ್ಟ ಅಥವಾ ಹಿಂದುಳಿದ ಜಾತಿಗಳಿಗೆ ಸೇರಿರುವ ಮುಂದಾಳುಗಳಿಂದ ಜನತೆಯಲ್ಲಿ ಕ್ರಾಂತಿಕಾರಕ ಬದಲಾವಣೆ ಉತ್ತೇಜನ ದೊರೆಯುವ ಸಂಭವ ಹೆಚ್ಚು. ರಾಜ್ಯದಲ್ಲೆಲ್ಲಾ ಉಂಟಾಗಬೇಕಾದ ಈ ಬದಲಾವಣೆಯಲ್ಲಿ ಪಂಚಾಯತ ಸದಸ್ಯರು, ಚುನಾಯಿತ ಅಧಿಕಾರಿಗಳಲ್ಲದೆ ಗ್ರಾಮಮಟ್ಟದಲ್ಲಿರುವ ಎಲ್ಲ ವಿಧವಾದ ಖಾಸಗೀ ಸಂಸ್ಥೆ (no-governmental Organisations)ಗಳಿಗೂ ಸಾಕಷ್ಟು ಪಾತ್ರವಿದೆ. ಈ ಸಂಸ್ಥೆಗಳು ಹಣದ ಆಸೆಬಿಟ್ಟು ಜನತೆ ಕಲ್ಯಾಣದಲ್ಲಿ ಭಾಗಿಗಳಾಗುವ ಮನೋಭಾವವನ್ನು ಬೆಳೆಸಿಕೊಂಡು ಬಂದರೆ ಅಪರಿಮಿತ ಪ್ರಯೋಜನವಾದೀತು. ಅಗಾಧವಾಗಿ ಬೆಳೆದು ಬಂದಿರುವ ಜಾತೀಯತೆ, ಸಂಪ್ರದಾಯದಲ್ಲಿ ಮೂಢನಂಬಿಕೆ, ಮಠ ಮತ್ತು ಪುರೋಹಿತಶಾಹಿಗಳ ಒತ್ತಡ, ನಿರಕ್ಷರತೆ ಮತ್ತು ನಿರ್ಬಲತೆಯ ದುಷ್ಪರಿಣಾಮಗಳನ್ನು ಹತ್ತಿಕ್ಕಲು ಸ್ಥಳೀಯ ಸಂಸ್ಥೆಗಳು ಸಹಕರಿಸಿದರೆ ಗ್ರಾಮ ಸಭೆಯಂತಹ ಸಾರ್ವಜನಿಕ ಸಭೆಗಳು ಪಂಚಾಯತ ಸಂಸ್ಥೆಗಳ ಮೇಲೆ ಪರಿಣಾಮಕಾರಿಯಾಗಿ ಉಸ್ತುವಾರಿಯಿಡಲು ಸಾಧ್ಯ.

ವಿದ್ಯಾಭ್ಯಾಸ, ವಿಜ್ಞಾನ, ಸಾರಿಗೆ, ಸಂಪರ್ಕ, ತಂತ್ರಜ್ಞಾನ, ಕೃಷಿ ವಿಜ್ಞಾನ, ಆಹಾರ ಸಂಸ್ಕರಣ, ಆರೋಗ್ಯ ರಕ್ಷಣೆ ಮೊದಲಾದ ಕ್ಷೇತ್ರಗಳಲ್ಲಿ ಸುಲಭವಾಗಿ ದೊರಕುವ ಅನುಕೂಲಗಳ ಮೂಲಕ ಈ ನಮೂನೆಯ ಸಾಮಾಜಿಕ ಬದಲಾವಣೆ ಅಸಾಧ್ಯವೆಂದೇನೂ ಅನ್ನಿಸುವುದಿಲ್ಲ. ಆದರೆ ಸಂಸ್ಥೆಗಳಾಗಲಿ, ರಾಜಕೀಯ ಅಂಗಗಳಾಗಲಿ ತಾವೇ ತಾವಾಗಿ ಒಳ್ಳೆಯದನ್ನಾಗಲಿ, ಕೆಟ್ಟದನ್ನಾಗಲಿ ಮಾಡುವುದಿಲ್ಲ. ಅವುಗಳ ಹೆಸರಿನಲ್ಲಿ ಕೆಲಸ ಮಾಡುವ ವ್ಯಕ್ತಿಗಳಿಂದ ಈ ವ್ಯತ್ಯಾಸ ಉಂಟಾಗುತ್ತದೆ. ಅಮಾಯಕ ಜನಸಾಮಾನ್ಯರಿಂದ ಭಿನ್ನವಾಗಿ ಹೆಚ್ಚಾಗಿ ವಿದ್ಯೆ, ಸಂಪತ್ತು, ಗೌರವಗಳನ್ನು ಸಂಪಾದಿಸಿರುವ ಅಲ್ಪಸಂಖ್ಯೆಯ ವ್ಯಕ್ತಿಗಳ ನಡತೆ, ಸಮಾಜಧೋರಣೆಗಳಲ್ಲಿ ಈಗ ಕ್ರಾಂತಿಕಾರಕ ಬದಲಾವಣೆ ಆದೀತೇ ಎನ್ನುವುದು ನಮ್ಮ ಮೂಲ ಪ್ರಶ್ನೆ. ಆಗಬಹುದೆಂಬ ಆಸೆಯೇನೋ ಇದೆ; ಭವಿಷ್ಯದ ವಿಷಯದಲ್ಲಿ ಆದೇ ಒಳ್ಳೆಯದಲ್ಲವೆ?

Reg. No. 055999/23/AL/93/TL

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರಸಾಹಿತ್ಯವನ್ನು ಹುಟ್ಟಿಸುವುದು ನಮ್ಮ ವಿಶ್ವವಿದ್ಯಾಲಯದ ಕರ್ತವ್ಯವಾಗಿದೆ. ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ. ಅವಕಾಶವೂ ಇದೆ.

**ಚಂದ್ರಶೇಖರ ಕಂಬಾರ**
*ಕುಲಪತಿಯವರು*